ಓಂ

ಶ್ರೀ ಸಾಲೇಶ್ವರಾಯನಮಃ

ಗೌರೀಗ್ರಂಥ ಮಾಲಾ ಸಂ. ೩

# ಸಂಗೀತ
# ಪ್ರೇಮಪರಿವರ್ತನ.

[ಸಾಮಾಜಿಕ ನಾಟಕಂ]



ಪ್ರಥಮ ಮುದ್ರಣ.

೧೯೩೭

ಲೇಖಕರು:—
ಪಂಡಿತ ಚೆನ್ನಬಸವಪ್ಪ ಎಲ್ಲಪ್ಪ ಕವಲಿ.
ಬ್ಯಾಡಗಿ.

ಬೆಲೆ—೧೨ ಆಣೆ.

ಗೌರೀ ಗ್ರಂಥಮಾಲಾ. ನಂ. ೩

ಸಂಗೀತ

# ಪ್ರೇಮ-ಪರಿವರ್ತನ!

(ಸಾಮಾಜಿಕ ನಾಟಕಂ)



ಲೇಖಕ:—

ಪಂಡಿತ ಚೆನ್ನಬಸವಪ್ಪ ಎಲ್ಲಪ್ಪ ಕವಲಿ,

ಬ್ಯಾಡಗಿ.

ಪ್ರಕಾಶಕ:—

ರಾಮಚಂದ್ರ ಎಲ್ಲಪ್ಪ ಕೋಡಮಗ್ಗಿ,

ನವನೀತ ಕಾರ್ಯಾಲಯ, ಬ್ಯಾಡಗಿ.

೧೯೨೭

ಬೆಲೆ ೧೨ ಆಣೆಗಳು.] [Price Re. 0-12-0

ಶ್ರೀ

# ಅರ್ಪಣ-ಪತ್ರಿಕೆ.



ಸಮಾಜ ಸುಧಾರಣೆಯು ಸಲುವಾಗಿ ಹಗಲಿರುಳೂ

ಯತ್ನಿಸುತ್ತಿದ್ದ. ನನ್ನ ವಿದ್ಯಾಭ್ಯಾಸ-ಸಹಾ

ಯಕರೂ, ಪೂಜ್ಯ ತೀರ್ಥ-

ಸ್ವರೂಪರೂ ಆದ

## ಕೈ. ವಾ.

## ವೀರಪ್ಪನವರು ಬುದ್ಧಿವಂತಪ್ಪನವರು ಹಮ್ಮಿಗಿ

ಇವರ ಚರಣಾರವಿಂದಗಳಲ್ಲಿ

ಅವರ ಔದಾರ್ಯ-ಪರೋಪಕಾರಾದಿ

ಗುಣಲುಬ್ಧನಾದ ನಾನು ಅತ್ಯಂತ

ನಮ್ರತೆಯಿಂದ ಈ ಅಲ್ಪ

ಕೃತಿಯನ್ನು ಸಮ

ರ್ಪಿಸಿರುವೆನು!



ಗ್ರಂಥಕರ್ತ.

# ಗುಟ್ಟು !

“ಕಾವ್ಯೇಷು ನಾಟಕಂ” ಎಂಬುದು ಸುಪ್ರಸಿದ್ಧವಾಗಿದೆ; ಆದರೆ ಈಗಿನ ಹೀನ ಪರಿಸ್ಥಿತಿಯನ್ನು ಸುಧಾರಿಸುವದಕ್ಕೆ ಅದರಲ್ಲಿಯೂ ನಮ್ಮ ಕರ್ನಾಟಕವನ್ನು ಮುಂದುವರಿಸುವದಕ್ಕೆ ಯಾವ ಬಗೆಯ ನಾಟಕಗಳು ಬೇಕೆಂಬದನ್ನು ನಿರ್ಣಯಿಸುವದು ಬಹು ಕಠಿಣವಾಗಿದೆ. ಜನ ಸಾಮಾನ್ಯಕ್ಕೆ ಪೌರಾಣಿಕ ನಾಟಕಗಳ ಹೊರತು ಐತಿಹಾಸಿಕ ನಾಟಕಗಳು ತಿಳಿಯುವದು ಸುಸಾಧ್ಯವಾಗಿ ತೋರುವದಿಲ್ಲ; ಸಾಮಾಜಿಕ ನಾಟಕಗಳಂತೂ ತಿಳಿಯುವದೇ ಇಲ್ಲ. ಇದು ನನ್ನ ಸ್ವಂತ ಅನುಭವಕ್ಕೆ ಬಂದಮಾತು; ಆದರೆ ಸದ್ಯಃಪರಿಸ್ಥಿತಿಯಲ್ಲಿ ಸಾಮಾಜಿಕ ನಾಟಕಗಳಲ್ಲಿ ನಮ್ಮ ನಡೆ-ನುಡಿಗಳಲ್ಲಿಯ ತಪ್ಪು ತಡೆಗಳು ನಿಚ್ಚಳವಾಗಿ ತಿಳಿದಂತೆ, ಉಳಿದ ನಾಟಕಗಳಲ್ಲಿ ತಿಳಿಯಲಾರವು. ಅಂತೆಯೇ ಮಹಾರಾಷ್ಟ್ರ ಬಂಗಾಲಿ ನಾಟಕ ಮಂಡಳಿಯವರು ವಿಶೇಷವಾಗಿ ಸಾಮಾಜಿಕ ನಾಟಕಕ್ಕೆ ಕೈಹಾಕಿರುವರು; ಮತ್ತು ಅದರಲ್ಲಿ ಯಶಸ್ಸನ್ನೂ ಹೊಂದುತ್ತಿರುವರು.

ಸಾಮಾಜಿಕ ಸುಧಾರಣೆಯ ಕಡೆಗೆ ನನ್ನ ಲಕ್ಷ್ಯ ಬಹಳ! ಆದುದರಿಂದ “ವೃದ್ಧಸ್ಯ ತರುಣೀ ವಿಷಂ” ಎಂಬ ವಿಷಯವನ್ನಧಿಕರಿಸಿ ಈ ನಾಟಕವನ್ನು ಬರೆದಿದೆ. ಇದರ ಯೋಗ್ಯಾಯೋಗ್ಯತೆಯನ್ನು ಪರೀಕ್ಷಿಸುವವರು ರಸಿಕರಾದ ವಾಚಕ ಮಹಾಶಯರು. ಇದನ್ನು ಅತ್ಯಲ್ಪಾವಧಿಯಲ್ಲಿಯೇ ಬರೆದು ಮುಗಿಸಿದುದರಿಂದಲೂ ತಿರುಗಿ ಪರೀಕ್ಷಿಸುವದಕ್ಕೆ ಅವಕಾಶವು ಸಿಕ್ಕದುದರಿಂದಲೂ ಅನೇಕ ಕಡೆಗೆ ತಪ್ಪುಗಳು ಬಿದ್ದಿರಬಹುದು. ಪ್ರಮಾದವಶಾತ್ ದಾಸಯ್ಯನ ಮಾತಿನಲ್ಲಿ ಶುದ್ಧ-ಗ್ರಾಮ್ಯ ಎರಡೂ ಬಗೆಯ ಭಾಷೆಗಳ ಉಪಯೋಗವಾಗಿದೆ ದ್ವಿತೀಯ ಮುದ್ರಣ ಸಮಯವೊದಗಿದರೆ ಅವುಗಳನ್ನು ಸರಿಪಡಿಸುವೆನು.

ಈ ಪುಸ್ತಕವನ್ನು ಮುದ್ರಿಸುವ ವಿಷಯದಲ್ಲಿ ನಮ್ಮ ನವನೀತ ಪತ್ರಿಕೆಯ ಪೋಷಕರೂ ಆಶ್ರಯದಾತರೂ ಮಾಡಿದ ಧನಸಹಾಯದ ಬಗ್ಗೆ ಅವರಿಗೆ ಅತ್ಯಂತ ಋಣಿಯಾಗಿದ್ದೇನೆ; ಮತ್ತು ಅಚ್ಚುಕಟ್ಟಾಗಿ ಪುಸ್ತಕವನ್ನು ಮುದ್ರಿಸಿ ಕೊಟ್ಟ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನ ಚಾಲಕರ ಉಪಕಾರವನ್ನು ನೆನೆಸುವೆನು. ನನ್ನೀ ಪ್ರಥಮ ಪ್ರಯತ್ನದಲ್ಲಿರಬಹುದಾದ ಕುಂದುಕೊರತೆಗಳನ್ನು ತಿಳಿಸುವ ಬಗ್ಗೆ ವಾಚಕಮಹಾಶಯರಿಗೆ ವಿನಂತಿಯನ್ನು ಮಾಡಿಕೊಂಡು ಇಲ್ಲಿಗೇ ವಿರಮಿಸುವೆನು. ಇಂತು.

ಬ್ಯಾಡಗಿ,
೮ನೇ ಎಪ್ರಿಲ್ ೧೯.೩೬.

ಪಂಡಿತ ಚೆನ್ನಬಸವಪ್ಪ ಕವಲಿ,
ಗ್ರಂಥಕರ್ತ.

-|| ಶ್ರೀ ||-

# ಪ್ರೇಮಪರಿವರ್ತನ.



ನಾಂದೀ:—

(ಸೂತ್ರಧಾರ ಮತ್ತು ಪಾರಿಪಾರ್ಶ್ವಕರು ಪೂಜಾಪಾತ್ರಹಸ್ತರಾಗಿ ನಿಂತಿರುವರು)

ಪದ ೧. ಗಿರಿಜಾಕಾಂತ ಗುಣಪೂತ | ವರಸುಖದಾತ ಸುರಗಣ ನಮಿತ ||
ಯತಿಜನ ಹೃದಯಾವಾಸ ಗಿರೀಶ | ನತಜನ ಸುರತರು ಪಾಪವಿನಾಶ || ೧ ||
ಭವ ಪರಿಹಾರ ಕವಿಜನಾಧಾರ | ಜವದೆ ನಮಿಸುವೆವು ಪೊರೆ ಸುಖಸಾರ || ೨ ||

ಪದ ೨. ಕಾಯೋ ಕಾಯೋ ಗುರುದೇವ ಪಾಪಾತ್ಮರ ಪಾಶದಿಂದೆ ಬೇಗ ಕುಮಾರಿಕೆಯರ ಜೀವ | ಧನದ ಮೋಹದೆ ಮಹಾವೃದ್ಧಜನರಿಗೆ | ನವ | ವನಿತೆಯಾಶೆಯು | ಬಹು | ಜನಿಸಿ ತೋರ್ಪುದು | ಧನಾಶಾದಿಂದೆ | ವಧೂ ಜನಕರು ತಾವ್ | ಘನ ಮುದವನುತಾಳುತ ನಿರುತ ತನುಜೆಯುವಗೆ ಕೊಡುವರು | ಜಾನಿ ಸದಾ ವಯೋ ಮಾನವ ಮಾನ | ಹಾನಿ ಸುಸಂತತಿಗಿಂತೀಗೆಲಂತಕರಾಗುವರು ||೧||

(ಪಾರಿಪಾರ್ಶ್ವಕರು ಹೋಗುತ್ತಾರೆ.)

ಸೂತ್ರಧಾರ—ನನ್ನ ಮನಮೋಹಿನಿಯು ಇನ್ನೂ ಏಕೆ ಬರಲಿಲ್ಲ? ಉತ್ಸವದ ಕಾಲದಲ್ಲಿ ಗಂಡಸರನ್ನು ಕಾಡಿಸುವದು ಹೆಂಗಳೆಯರ ಹುಟ್ಟುಗುಣವೇ ಆಗಿ ಹೋಗಿದೆ. ಇಲ್ಲದ್ದೊಂದು ಆಶೆಯನ್ನು ಹಿಡಕೊಂಡು ಅದನ್ನು ಪತಿಯು ಪೂರಯಿಸದಿದ್ದರೆ, ಇಂಥ ಆಯುತ್ತ ವೇಳೆಯಲ್ಲಿ ಅವರ ಮೂಗು ಹಿಡಿದುಬಿಡುವರು. ಆಭರಣಗಳ ಹುಚ್ಚಂತೂ ಕೇಳಬೇಕಾದದ್ದೇ ಇಲ್ಲ. ಯಾವ ಅಕಾರ್ಯವನ್ನು ಮಾಡಿಯಾದರೂ ಶ್ರೀಮಂತಿಕೆಯನ್ನು ಮೆರೆಸಬೇಕೆನ್ನುವರು. (ನೋಡಿ) ಇನ್ನೂ ಬರಲೇ ಇಲ್ಲವಲ್ಲ! ಏ ಪ್ರಿಯೇ, ಮನೋಹರೇ, ಕುರಂಗಾಕ್ಷೀ, ಕಮಲದಳಾಯತ ನಯನೇ, ಹಂಸಗಾಮಿನೀ, ಕಾಳವೇಣೀ, ಚಂದ್ರಾನನೇ, ಚಾರುಗಾತ್ರೀ.......ಮಂದಮತಿಯಾದ ನಾನು ಇನ್ನೆಲ್ಲಿ ಅಮರಕೋಶವನ್ನು ಬಿಚ್ಚಲಿ? (ನೋಡಿ) ಆಃ! ಬಂದಳು ಮಹಾಮಾರಿಯು! (ಪ್ರ.) ಬಾ ಪ್ರಿಯೇ, ಅಲಂಕಾರ ಪೂರಿತಳಾಗಿದ್ದರೆ ಇತ್ತ ಬಾ!

ನಟಿ (ಎಂದು)—ಹುಂ! ನಿನ್ನಂಥ ಸುದಾಮನ ಕೈಹಿಡಿದಮೇಲೆ ಅಲಂಕಾರಕ್ಕೇನು ಕೊರತೆ? ಲಂಕೆಯ ಪಾರ್ವತಿಗೂ ಇಷ್ಟು ಆಭರಣಗಳಿರಲಿಕ್ಕಿಲ್ಲ! ಹೇಳಿ ಹೇಳಿ ಸಾಕಾಯಿತು. (ಅಳುವಳು)

ಸೂತ್ರ—ಹೊರಟಿತು ಆಗಲೇ ಗಂಗಾ-ಯಮುನಾಪ್ರವಾಹ! ನಿಃಶಸ್ತ್ರ ಪ್ರತೀಕಾರವೆಂದರೆ ಇದೇ. ಪುರುಷರನ್ನು ಗೆಲ್ಲಲಿಕ್ಕೆ ಹೆಂಗಸರಿಗೆ ಇದಕ್ಕಿಂತ ಬೇರೆ ಆಯುಧವೇ ಬೇಡ. ಈ ಆಯುಧವು ಹೊರಗೆ ಬರುವದೊಂದೇ ತಡ, ಪುರುಷನು ಇದ್ದಕ್ಕಿದ್ದಹಾಗೆಯೇ ಕಟಿದ ಗೊಂಬೆಯಾಗುತ್ತಾನೆ. ಅಂತೂ ಇಂದು ಈ ಸಾಮಾಜಿಕರಿಗೆ ಆನಂದವನ್ನುಂಟುಮಾಡುವದನ್ನು ಬಿಟ್ಟು, ಇವಳ ಸಮಾಧಾನಮಾಡುವದರಲ್ಲಿಯೇ ಮೈಯಲ್ಲಿ ನೀರು ಹರಿಯುವಂತೆ ಕಾಣುತ್ತದೆ. ಪ್ರಿಯೇ............

ನಟಿ—(ಸ್ವಗತಂ) ಇನ್ನು ಬಿಗಿಹಿಡಿಯುವದು ತರವಲ್ಲ. ಮನಸ್ಸನ್ನು ಪ್ರಸನ್ನೀಕರಿಸಿ, ಕೆಲಸವನ್ನು ಸಾಧಿಸಿಕೊಳ್ಳಬೇಕು. (ಪ್ರಕಾಶಂ) ಇದೋ ತಮ್ಮ ದಾಸಿಯು ಸೇವೆಗೆ ಸಿದ್ಧಳಾಗಿರುವಳು.

ಸೂತ್ರ—ಆಃ! ಕೋಕಿಲೆಯ ಕಲರವವನ್ನು ತಿರಸ್ಕರಿಸುವ ನಿನ್ನ ಮಂಜುಲ ಧ್ವನಿಯಿಂದ ಪಂಚಮಸ್ವರದಲ್ಲೊಂದು ಗಾನವನ್ನು ಮಾಡು.

ನಟಿ—ಯಾವ ವಿಷಯವನ್ನು ಕುರಿತು ಹಾಡಲಿ?

ಸೂತ್ರ—ಒಳ್ಳೇ ಪ್ರಶ್ನೆ! ಕುಟ್ಟುವಾಗ, ಬೀಸುವಾಗ, ಒಗೆಯುವಾಗ, ದಾರಿಯಲ್ಲಿ ಹೋಗುವಾಗ ಯಾವಾಗಲೂ ನಿಮಗೆ ಬಾಯಿ ಸುಮ್ಮನಿಟ್ಟು ಗೊತ್ತೇ ಇಲ್ಲ. ಈಗಲೂ ಒಮ್ಮೆ ಬಾಯಿಬಿಡು.

ಬೀಸುವ ಪದ—ಗದಗು ಬೆಟಗೇರಿ ಮರ್ದದ ಕೇರಿಮ್ಯಾಲೆ ಮಾರಿನೋಡಿ ಎನ್ನಗಲಿದರವ್ವಾ | ಹುಬ್ಬಳ್ಳಿ ಪ್ಯಾಟ್ಯಾಗ | ಇಬ್ಬರೊಂದಾಗಿ ಕೂಡೆ | ಕಬ್ಬಿನ ಮಾರಾಟ | ಮಬ್ಬುಗತ್ತಲಾದಾಗ ತಪ್ಪಿ ತಪ್ಪಿಸುತಲಿ || ಮಾರಿನೋಡಿ ||

ನಟಿ—ಇದೇನು ಪ್ರಿಯನೇ, ಇಲ್ಲದ ಹುಡುಗಾಟಿಕೆ. ಹರೆಯದ ಹುಡುಗೆಯನ್ನು ಮಾಡಿಕೊಂಡ ಮುದುಕನು ತಾನೂ ಹುಡುಗನಾಗಬೇಕೆಂದು ಅವಳ ಸಂಗಡ ಹುಡುಗಾಟಿಕೆ ಮಾಡುವಂತೆ ಅಸಹ್ಯವಾಗಿ ಕಾಣುತ್ತದೆ.

ಸೂತ್ರ—ನಿನಗೆ ಅಸಹ್ಯವಾಗಿದ್ದರೆ, ಬೇಡವೇ ಬೇಡ. ಹಾಗಿದ್ದರೆ ಕಾಮಣ್ಣನಂತಿರುವ ನನ್ನನ್ನೇ ವರ್ಣಿಸಿ ಹಾಡು.

ನಟಿ—ಊಹು! (ಎಂದು ನಾಚಿ ನಿಲ್ಲುವಳು)

ಸೂತ್ರ—ಹೆಂಗಸರಿಗೆ ತಮ್ಮ ಮನಸ್ಸಿನಲ್ಲಿದ್ದರೂ, ತಮ್ಮ ಗಂಡಂದಿರ ಹೆಸರನ್ನು ಹೇಳಬೇಕೆಂದರೆ ಬಹು ನಾಚಿಕೆ, ಇರಲಿ. ಯಾವನೊಬ್ಬ ಮಹಾತ್ಮನನ್ನು ವರ್ಣಿಸು ಹಾಗಾದರೆ.

ನಟಿ—ಅಪ್ಪಣೆ.

ಪದ ೩. ಪರಮಪುರುಷನಿವನೇ | ನರನೇ || ಸುರಲೋಕದೆ ತಾನಾಗಮಿಸಿಹನೇ || ತಿರೆಯೊಳ್ ಧರ್ಮಕೆ ಚ್ಯುತಿಯೊದಗಲು ಸುಜ | ನರ ಪಾಲಿಸಿ ಕುಜನ ವಧಿಸುತಿಹಾ || ೧ || ಕ್ರೋಧವ ಶಾಂತಿಯಿಂ ಗೆಲ್ಲುವ ತತ್ವನ | ಈ ಧಾರುಣಿಯೊಳ್ ತಿಳಿಸುತೆ ಬರುವ || ೨ ||

ಈಗ ನಾನು ಮಾಡತಕ್ಕದ್ದೇನು?

ಸೂತ್ರ—ಮೋಹಿನೀ, ನಿನ್ನಂಥ ಪತ್ನಿಯಿದ್ದಮೇಲೆ ನನ್ನ ಆನಂದಕ್ಕೇನು ಕಡಿಮೆ? ಆದರೆ ಈಗ ರಸಜ್ಞರಾದ ಸಭಿಕ ಮಹಾಶಯರು—"ಯಾವದಾದರೊಂದು ಸಾಮಾಜಿಕ ನಾಟಕವನ್ನು ಪ್ರಯೋಗಿಸಿ ಆಲ್ಹಾದಪಡಿಸಬೇಕೆ"ಂದು ನನಗೆ ಆಜ್ಞಾಪಿಸಿದ್ದಾರೆ. ಆದ್ದರಿಂದ ಸಹಾಯಾರ್ಥವಾಗಿ ನಿನ್ನನ್ನು ಕರೆಯಿಸಬೇಕಾಯಿತು. ಕೇಳು.

ಸಾಕಿ—ಕೇಳ್ ಕೋಮಲೆ ವರಸಂಸ್ಕೃತಿರಥಕೆ ನರನಾರಿಯರೇ ಗಾಲಿಗಳು |
ಎರಡರೊಳೊಂದೇ ಸರಿಯಾಗಿರದೊಡೆ | ಚರಿಸದು ರಥವು | ವರಸುಖದೊರೆಯದು ತಾ ||

ನಟಿ—ಈಗ ಯಾವ ನಾಟಕವನ್ನು ಮಾಡೋಣ?

ಸೂತ್ರ—ಇತ್ತೀಚೆಗೆ ಕನ್ಯೆಯರ ಮೇಲೆ ಮುದುಕರ ಹಾವಳಿಯು ಬಹಳವಾಗಿರುವದರಿಂದ, 'ವೃದ್ಧಸ್ಯ ತರುಣೀ ವಿಷಂ' ಎಂಬ ವಿಷಯವನ್ನಧಿಕರಿಸಿ ಬರೆದಿರುವ "ಪ್ರೇಮಪರಿವರ್ತನ" ಎಂಬ ಆಖ್ಯಾನವನ್ನು ಮಾಡೋಣ.

ನಟಿ—ಇಶ್ಯ! ಇದೇನಿದು? ಶಾಕುಂತಲವಲ್ಲ, ಮಹಾವೀರ ಚರಿತವಲ್ಲ, ರತ್ನಾವಳಿಯಲ್ಲ; ಹಿಂದಿನವೇ ಸಾವಿರಾರು ನಾಟಕಗಳಿರುತ್ತಿರಲಿಕ್ಕೆ ಈ ನಾಟಕವನ್ನೇಕೆ ಮಾಡಬೇಕು?

ಸೂತ್ರ:—ಹಾಗಲ್ಲ ಪ್ರಿಯೇ! "ಪುರಾಣಮಿತ್ಯೇವ ನ ಸಾಧುಸರ್ವಂ ನಚಾಪಿ ಹೇಯಂ ನವಮಿತ್ಯವದ್ಯಂ" ಎಂದು ಆ ಮಹಾಕವಿಯೇ ಹೇಳಿಲ್ಲವೇ? ಈಗಿನ ಧನಪಿಶಾಚಿಯ ಸಂಚಾರದಲ್ಲಿ ಸಮಾಜದಲ್ಲಿಯ ದುರಾಚಾರಗಳನ್ನು ಮುರಿಯಲಿಕ್ಕೆ ಇಂಥ ನಾಟಕಗಳೇ ಬೇಕಾಗಿವೆ.

ನಟಿ:—ಮಳೆಯು ಬಿದ್ದ ಕೂಡಲೆ ಕಾಲಿಡಲಿಕ್ಕೆ ತೆರಪಿಲ್ಲದೆ ಏಳುವ ಅಣಬೆಗಳಂತೆ, ನಾಟಕಕಾರರೆಂದೆನಿಸಿಕೊಳ್ಳುವವರು ಈಗ ಎಷ್ಟೋ ಜನರಿದ್ದಾರೆ. ಈ ನಾಟಕವನ್ನು ಬರೆದವರು ಯಾರು?

ಸೂತ್ರ—ಕೇಳು—ಕಂದ

ಕನ್ನಡದೊಳ್ ಪಾಂಡಿತ್ಯವ | ನುನ್ನತ ಸಕ್ಕದದೊಳಂತೆ ನೈಪುಣ್ಯವ ತಾ ||
ನಿನ್ನು ಪಡೆದಿರ್ಪ ಕವಲೀ | ಚೆನ್ನಬಸವ ನತ್ತಿಕರ್ತೃ ! ವ್ಯಾಧಪುರಸ್ಥಂ ||

ನಟಿ (ಸ್ವ):—ಈಗ ಸ್ವಾರಿಯು ಒಳ್ಳೇ ಆವೇಶದಲ್ಲಿದೆ. ಈಗಲೇ ಕೆಲಸವನ್ನು ಸಾಧಿಸಿಕೊಳ್ಳಬೇಕು. (ಪ್ರಕಾಶಂ) ಪ್ರಿಯನೇ, ನನಗೆ ಮುತ್ತಿನ ಏಕಾವಳೀ ಸರವನ್ನೂ ಪಾಟಲಿಗಳನ್ನೂ ತರುವದಿಲ್ಲವೇ?

ಸೂತ್ರ—ಪ್ರಿಯಳೇ, ನಿನಗೆ ದುಃಖವಾಗಬಾರದೆಂದು ಇಲ್ಲಿಯವರೆಗೆ ಮನೆಯಲ್ಲಿ ಇದ್ದ ಬಿದ್ದ ಸಾಮಾನುಗಳನ್ನೆಲ್ಲ ಮಾರಿ ನಿನ್ನ ಇಚ್ಛೆಯನ್ನು ಪೂರ್ಣ ಮಾಡಿದೆನು. ಇನ್ನು ಯಾವದಾದರೂ ಮಾರುವದುಳಿದಿದ್ದರೆ ಹೇಳು; ಅದನ್ನೂ ನಿರ್ನಾಮ ಮಾಡಲಿಕ್ಕೆ ಹಿಂಜರಿಯುವದಿಲ್ಲ!

ನಟಿ—ನನಗೆ ಒಂದುಪಾಯವು ತೋರುತ್ತದೆ. ಅದರಿಂದ ಮಾತ್ರ ಒಮ್ಮೆಲೆ ಎರಡು ಕೆಲಸಗಳಾಗುತ್ತವೆ. ಆದರೆ ಹೇಳುವದಕ್ಕೆ ನಾಚಿಕೆ ಬರುತ್ತದೆ.

ಸೂತ್ರ—ನಾವು ಸುಖಿಸಿಂದಿರಲಿಕ್ಕೆ ಹೆರರ ಹೆದರಿಕೆಯೇನು? ಹೇಳು ಹೇಳು?

ನಟಿ—(ಮೆಲ್ಲಗೆ) ನಮಗೆ ಮಗಳಿರುವಳಲ್ಲವೇ? ಆಕೆ........

ಸೂತ್ರ—ಹೂ! ಅವಳನ್ನೇ ಮಾರಬೇಕೆಂದೆಯೇನು?

ನಟಿ:—ಹೇಳುವದಿಲ್ಲ ಹೋಗಿರಿ ಹಾಗಾದರೆ........(ಎಂದು ಮುನಿಸು ಗುಡುವಳು)

ಸೂತ್ರ—ಛೀ ಛೀ, ಹೇಳು ಹೂ ಹೇಳು.

ನಟಿ—ಆಕೆಯನ್ನು ಯಾವನೊಬ್ಬ ಶ್ರೀಮಂತ ವರನಿಗೆ ಕೊಟ್ಟರೆ, ನಮಗೆ ವಿಪುಲವಾಗಿ ದುಡ್ಡು ದೊರೆಯುವದಲ್ಲದೆ ಮಗಳ ಲಗ್ನವೂ ಅನಾಯಾಸವಾಗಿಯೇ ಆಗುವದು.

ಸೂತ್ರ—ಮೊದಲು ತೆರವನ್ನು ತಕ್ಕೊಳ್ಳುವದು ಅವಿವೇಕತನವು, ಮತ್ತು ಪಾಪಕ್ಕೆ ಸಾಧನವು; ಇದಲ್ಲದೆ ನಿನ್ನ ವಿಲಾಸ ವೈಭವಗಳಿಗೆ ತಕ್ಕಂತೆ ದುಡ್ಡು

ಕೊಟ್ಟು ಮಗಳನ್ನು ಒಯ್ಯಬೇಕಾದರೆ ನೂರನೆಯ ನಾಲ್ಕನೆಯ ಲಗ್ನದ ಯಾವನೊಬ್ಬ ಮುದುಕನೇ ಸರಿ. ಅಂಥವನೊಡನೆ ನನ್ನ ಮಗಳು ಬಾಳ್ವೆ ಮಾಡುವದೆಂತು? ಹೇಳಿ ಕೇಳಿ ಮಗಳನ್ನು ಸುಡುಗಾಡಿಗೆ ಧಾರೆಯೆರೆದಂತಾಗುವದು.

ನಟಿ—ಪ್ರಿಯನೇ, ನಾವು ಹುಟ್ಟಿಸಿರುವದಿಷ್ಟೇ ಅಲ್ಲದೆ, ಹಣೆಯಬರಹವನ್ನೇನೂ ಬರೆದಿಲ್ಲ. ಮಗಳ ಕುಂಕುಮವೇ ಹೆಚ್ಚಾಗಿದ್ದರೆ, ಆ ಮುದುಕನೆದುರಿಗೆ ಈಕೆಯೇ ಏಕೆ ಸಾಯಬಾರದು? ಅಥವಾ ಆ ಮುದುಕನಿಗೇ ಏಕೆ ಆಯುಷ್ಯವು ಬೆಳೆಯಬಾರದು? ಮಗಳನ್ನು ಸಾಕಿ ಸಲುಹಿ ದೊಡ್ಡವಳನ್ನು ಮಾಡಿ ಸುಮ್ಮನೆ ಕೊಡಲಿಕ್ಕೆ ನಾವೇನು ವರನ ಗಂಟು ತಿಂದಿರುವದಿಲ್ಲ. ಕನ್ಯಾದಾನ ಮಾಡುವದು ಶ್ರೀಮಂತರ ಮಾತು. ನಮ್ಮಂಥ ಬಡವರು ತೆರವು ತಕ್ಕೊಳ್ಳದಿದ್ದರೆ ನಮ್ಮ ಪ್ರಪಂಚವು ಹೇಗೆ ನಡೆಯಬೇಕು?

ಸೂತ್ರ—ಪ್ರಿಯೇ, ನಮ್ಮ ಸಲುವಾಗಿ ಮಗಳ ಗೋಣು ಕೊಯ್ಯುವದು ಸರಿಯಲ್ಲ. ಇಲ್ಲಿಯವರೆಗೆ ಯಾರಾದರೂ ಹೀಗೆ ಮಾಡಿರುವರೇ?

ನಟಿ—(ತೋರಿಸಿ) ಇಗೋ ಇಲ್ಲಿಯೇ ಬರುತ್ತಿರುವಳು ನೋಡಿರಿ. ಈ ರಮಾಬಾಯಿಯು ಒಬ್ಬ ಮುದುಕನಿಗೆ ತನ್ನ ಮಗಳನ್ನು ಕೊಡುತ್ತೇನೆಂದು ವಾಗ್ದಾನಮಾಡಿದ ಮಾತ್ರದಿಂದಲೇ ಹೇಗೆ ನಿಜವಾಗಿಯೂ ರಮಾಬಾಯಿಯೇ ಆಗಿರುವಳು!

ಸೂತ್ರ—ಓಹೋ! ಆಗಲೇ ಪಾತ್ರ ಸಿದ್ಧತೆಯಾಗಿರುವದು. ಮುಂದಿನ ಕಾರ್ಯಕ್ಕಾಗಿ ನಡೆ ಹೋಗೋಣ.

---

# ಅಂಕ ೧

—(೦)—

## ಪ್ರವೇಶ—೧

ಸ್ಥಳ:—ರಸ್ತೆ, ರಮಾಬಾಯಿಯು ಸೋಗುಮಾಡುತ್ತ ಬರುವಳು.

**ರಮಾಬಾಯಿ:**—ಸತ್ತಮೇಲೆ ಮನುಷ್ಯನು ಏನಾಗುತ್ತಾನೆಂಬದು ತಿಳಿಯದಿರುವಾಗ ಸ್ವರ್ಗ-ನರಕ ಪಾಪ-ಪುಣ್ಯಗಳ ವಿಚಾರಮಾಡುತ್ತ ಕುಳಿತು ಇಹಲೋಕದ ಸೌಖ್ಯಕ್ಕೆ ಎರವಾಗುವದು ಶುದ್ಧ ತಪ್ಪು. ನನ್ನ ಗಂಡನು ತೀರಿ

ಕೊಂಡು ಹನ್ನೆರಡು ವರ್ಷಗಳಾಗಿ ಹೋಯಿತು. ಮನೆಯಲ್ಲಿ ಯಾರೂ ದುಡಿಯುವವರು ಇಲ್ಲದ್ದರಿಂದ ಮಗಳೊಡನೆ ಭಿಕ್ಷಾಪಾತ್ರೆಯನ್ನು ಹಿಡಿಯಬೇಕಾಗಿತ್ತು. ಆದರೆ ಹುಟ್ಟಿಸಿದ ದೇವರು ಹುಲ್ಲು ಮೇಯಿಸುವದಿಲ್ಲವೆಂಬದು ನಿಜ. ರಾವಬಹದ್ದೂರ ವಿನಾಯಕರಾಯರೆಂಬವರು ಯಾಕೋ ಏನೋ? ದೇವರು ಅವರ ಮನಸ್ಸಿನಲ್ಲಿ ಹೊಕ್ಕು ನನ್ನ ತವರುಮನೆಯ ಸಂಬಂಧವನ್ನು ಹಚ್ಚಿ ಸುಖದ ಮಾರ್ಗವನ್ನು ತೋರಿಸಿರುವನು. ಆತನ ದಯೆಯಿಂದಲೇ ಇಷ್ಟೆಲ್ಲ ಶ್ರೀಮಂತಿಕೆಯನ್ನು ಮೆರೆಸುತ್ತೇನೆ. ಇನ್ನು ನನ್ನ ಮಗಳ ಚಿಂತೆಯೊಂದು ಬಹಳವಾಗಿತ್ತು. ಆ ವಿನಾಯಕರಾಯರು ತಾವಾಗಿಯೇ ನನ್ನ ಮಗಳ ಕೈಹಿಡಿಯಲು ಇಚ್ಛೆತೋರಿಸುತ್ತಿರುವದರಿಂದ ಅದೂ ದೂರವಾಗಿದೆ. ಇದೊಂದು ಭಾಗ್ಯವೇ. ಆದರೆ ಆ ಮಂದಭಾಗ್ಯಳು ವಸಂತನೆಂಬ ಡಾಕ್ಟರನ ಸೆಳವಿಗೆ ಬಿದ್ದು, ಮುದುಕನೆಂದು ಇವರನ್ನು ತಿರಸ್ಕರಿಸುತ್ತಿರುವಳು. ಯಾಕೆ? ಇವರಂತೆ ಅರವತ್ತು ವರುಷದವರೇನು ಲಗ್ನಮಾಡಿಕೊಳ್ಳುವದಿಲ್ಲವೇ? ಪಾಪ! ತಿಳಿಗೇಡಿ ಹುಡುಗಿ! ಅವಳ ಮನಸ್ಸನ್ನು ಒಲಿಸುವದೆಂತು? (ವಿಚಾರಿಸಿ) ಹಾ! ಈಗ ವಿನಾಯಕರಾಯರ ಕೈಯಿಂದ ತಪ್ಪಿಸಿಕೊಳ್ಳಲಿಕ್ಕೂ ಬರುವಂತಿಲ್ಲ. ನನ್ನ ಬಡತನದ ಬಳಲಿಕೆಯು ತಪ್ಪುವದೆಂಬ ದುರಾಶೆಯಿಂದ ಸುಮ್ಮ ಸುಮ್ಮನೆ ಅವರಿಗೆ ಸಾವಿರ ರೂಪಾಯಿಗಳ ಪ್ರಾಮಿಶರಿ ನೋಟ ಬರಕೊಟ್ಟಿದ್ದೇನೆ. ಈಗ ಕಮಲಾವತಿಯನ್ನು ಕೊಡುವದಿಲ್ಲವೆಂದು ಹೇಳಿದರೆ ಸೆಟ್ಟಿಗೆ ನನಗೆ ತುರಂಗದ ದಾರೀ ತೋರಿಸುವರು. ಈ ಹಾಳಾದ ಆಭರಣಗಳೇ ಸ್ತ್ರೀಯರಿಗೆ ಇಲ್ಲದ ದುರ್ಗುಣಗಳನ್ನು ಕಲಿಸುವವು. ಕಮಲೆಗೆ ಹೇಗೂ ನನ್ನ ಮೇಲೆ ಪೂರ್ಣವಿಶ್ವಾಸವಿದೆ. ನನ್ನ ಕಣ್ಣೀರು ಕಂಡಾಗ ಅವಳು ನನ್ನ ಮನಸ್ಸಿನ ವಿರುದ್ಧವಾಗಿ ಎಂದೂ ಹೋಗಿಲ್ಲ. ಈಗ ಮಾಡಬೇಕೇನು? ಹಾ! ನಾನು ಕಮಲಾವತಿಯ ವಿದ್ಯಾಭ್ಯಾಸದ ಸಲುವಾಗಿಯೇ ವಿನಾಯಕರಾಯರಲ್ಲಿ ಚಂದ್ರಹಾರವನ್ನು ಕದ್ದಿದ್ದೆನೆಂದೂ ಆಗ ಕಮಲೆಯನ್ನು ಅವರಿಗೆ ಲಗ್ನಮಾಡಿಕೊಡುವದಕ್ಕಾಗಿ ವಚನಕೊಟ್ಟಿರುವೆನೆಂದೂ ಹೇಳಬೇಕು. ಎಂದರೆ ಅವಳು ಸುಮ್ಮನೆ ಒಪ್ಪುವಳು, ಇದೇ ಉಪಾಯ. ವಿನಾಯಕರಾಯರು ಕನ್ಯಾರ್ಥಿಗಳಾಗಿ ಮನೆಗೆ ಬರುವ ಹೊತ್ತಾಯಿತು, ಹೋಗುವೆನು.

---

## ಪ್ರವೇಶ—೨

ಸ್ಥಳ:—ಉಪವನ, ಡಾ. ವಸಂತರಾಯರು ಬರುವರು.

ವಸಂತ:—ಪದ— ಖರಾತೋ ಪ್ರೇಮ.

ಅವತರಿಸಿದಳೇನೋ ತರುಣಿಯೊಸುರರಮಣಿ | ಜಗದೆ ||ಪಲ್ಲ|| ಕಮಲಾಲಯೆ ತಾ ಸುಮಧುರ ರೂಪದೆ | ಕಮಲಾದೇವಿಯ ವೇಷಧರಿಸಿ || ೧ || ಕರಿಗಮನವ ವರ ಸರಸಿಜ ನಯನವ | ಉರಗವೇಣಿಯ ತಾಳಿ | ಭರದೆ || ೨ ||

ಸಂಕಲ್ಪ ಮತ್ತು ಸಿದ್ಧಿ ಇವುಗಳ ನಡುವೆ ಯಾವಾಗಲೂ ಪರಮೇಶ್ವರನ ಇಚ್ಛೆಯು ನಿಂತೇ ಇರುತ್ತದೆ. ಇದು ತಿಳಿದಿದ್ದರೂ ಇಚ್ಛಿತ ಕಾರ್ಯವು ಕೈಗೂಡುವವರೆಗೆ ಮನಸ್ಸಿನ ಶಾಂತತೆಯಿರುವದಿಲ್ಲ. ಅದರಲ್ಲಿಯೂ ಸತ್ಕಾರ್ಯಕ್ಕೆ ವಿಘ್ನಗಳು ಬಹಳ. ನಮ್ಮ ಲಗ್ನದ ವಿಷಯವನ್ನು ರಮಾಬಾಯಿಯ ಎದುರಿಗೆ ತಿಳಿಸಲಿಕ್ಕೆ ಕಮಲಾವತಿಗೆ ಎಷ್ಟೋ ಸಾರೆ ಹೇಳಿರುವೆನು. ಆದರೆ ಆ ಧರ್ಮೋನ್ಮಾದಿನಿಯ ಮುಂದೆ ಈ ವಿಷಯವನ್ನು ತಿಳಿಸಲಿಕ್ಕೆ ಇಬ್ಬರಿಗೂ ಅಂಜಿಕೆ. ಕೇವಲ ದುಡ್ಡಿಗಾಗಿ ವ್ರತನಿಯಮಗಳನ್ನು ಮಾಡಿ ಹೆಣ್ಣು ಮಕ್ಕಳನ್ನು ಹಡೆಯುವ ಎಷ್ಟೋ ನರಾಧಮರು ಕಣ್ಣಿಗೆ ಬೀಳುತ್ತಾರೆ. ಕಮಲಾವತಿಯನ್ನು ಮುದುಕನಾದ ರಾವಬಹದ್ದೂರ ವಿನಾಯಕರಾಯರಿಗೆ ಕೊಟ್ಟು ಮದುವೆಮಾಡಿಕೊಡಲಿಕ್ಕೆ ರಮಾಬಾಯಿಯು ಮನಸ್ಸಿದೆ; ಸಮಾಜವಂತೂ ಒಂಟಿಗಾಲಿನಮೇಲೆ ಸಿದ್ಧವಾಗಿದೆ. ಆದರೆ ಬಾಲ್ಯದಲ್ಲಿಯೇ ತನ್ನ ಪತಿಯನ್ನು ಕಳಕೊಂಡ ಸುಶೀಲ ವಿಧವೆಯರ ಕಡೆಗೆ ಒಬ್ಬರ ಲಕ್ಷ್ಯವೂ ಇಲ್ಲ. ಅವರ ಕೈಯೊಳಗಿನ ನೀರು ಕುಡಿದರೆ ಸಹ ಇವರ ಧರ್ಮವು ಹಾಳಾಗಿ ಹೋಗುವದು. ಏನು ಸಮಾಜವೋ, ಏನು ಸೈತಾನೀ ಸಾಮ್ರಾಜ್ಯವೋ! ಮುದುಕರಿಗೆ ಮುದಿಹರೆ ತಿರುಗಿದ ಈ ದಿವಸಗಳಲ್ಲಿ ನಮ್ಮಂಥ ತರುಣರಿಗೆ ಕಾವೀಶಾಟಿಯೇ ಗತಿ. (ಗಡಿಯಾರ ನೋಡಿ) ಕಮಲಾವತಿಯು ಇನ್ನು ಏಕೆ ಬರಲಿಲ್ಲ? ಕದಾಚಿತ್ ಅವರ ತಾಯಿಯೇ ಆಕೆಯನ್ನು ತಡೆದಿರಬಹುದು. (ನೋಡಿ) ಓಹೋ ಕಮಲಾವತಿಯು ಬರುತ್ತಿರುವಳು. ಬಾ, ಕಮಲಾವತೀ, ನೀನು ಇಷ್ಟು ತಡಮಾಡಿದ್ದಕ್ಕಾಗಿ ಮನಸ್ಸು ಒಂದೇಸವನೆ ತಳಮಳಿಸುತ್ತಿತ್ತು!

ಕಮಲಾವತಿ—ವಸಂತರಾವ, ನನ್ನ ಪ್ರೇಮದ ವಿಷಯದಲ್ಲಿ ನಿಮಗೆ ಇಷ್ಟು ಸಂಶಯವೇಕೆ?

ವಸಂತ—ಕಮಲೇ, ನಿನ್ನ ವಿಷಯವಾಗಿ ನಾನು ಸಂಶಯ ಪಡುತ್ತೇನೆಂದು ಕನಸುಮನಸಿನಲ್ಲಿಯೂ ಎಣಿಸಬೇಡ; ಆದರೆ ಪ್ರೇಮದ ಈ ಕಣ್ಣುಮುಚ್ಚಾಣಿಕೆಯ ಆಟವನ್ನು ಹೀಗೆಯೇ ಎಷ್ಟು ದಿವಸ ಸಾಗಿಸುವೆ? ಇದರಿಂದ ಲಾಭವಾದರೂ ಏನು?

ಕಮಲಾ—ಹಾಗಾದರೆ ನಿಮಗೆ ಪ್ರೇಮದ ನಿಜಸ್ವರೂಪವು ಸರಿಯಾಗಿ ತಿಳಿದಿಲ್ಲವೆಂದೇ ಹೇಳಬೇಕಾಗುವದು.

ವಸಂತ—ಯಾಕೆ? ನನ್ನಲ್ಲಿ ಅಂಥ ಅರಸಿಕತನವನ್ನೇನು ಕಂಡೆ?

ಕಮಲಾ—ಡಾಕ್ಟರಸಾಹೇಬ, ನನ್ನ ಮೇಲೆ ನಿಮ್ಮ ನಿಜವಾದ ಪ್ರೇಮವಿರುವದಲ್ಲವೇ? ಹಾಗಿದ್ದರೆ ನಿಮ್ಮಂತೆಯೇ ನನ್ನ ಹೃದಯವೆಂದು ಏಕೆ ತಿಳಿಯಬಾರದು?

ವಸಂತ—ತಿಳಕೊಳ್ಳದಿದ್ದರೆ ಮಾಡಬೇಕೇನು? ಸ್ವಂತ ಅಧಿಕಾರದ ಮೋಹನಮಾಲೆಯು ಕಣ್ಣೆದುರಿಗೆ ಸಮೀಪದಲ್ಲಿಯೇ ಇರುತ್ತಿರಲು, ಅದಕ್ಕೆ ಕೈಹಚ್ಚುವದಕ್ಕೆ ಸಹ ನಾನು ಕಳ್ಳನಾದ ಮೇಲೆ ಇದಕ್ಕಿಂತ ಹೆಚ್ಚಿನ ಆತ್ಮಸಂಯಮನವಿನ್ನಾವದು?

ಕಮಲಾ—ಪದ—ಧನರಾಶಿ ದಿಸತಾ-

ಅಮರಾಸ್ಥಾನದೊಳು ಸೇರುವನವನೇ ಸುವಿಚಾರಿಯು ಸದಾಚಾರಿಯು||
ಹರಿಯುವ ಕರಣಗಳುರೆ ತಡೆಯುತಲಿ|ಭರದಿಂ ಪೋಗುವ ಮನವನು ನಿಜ
ಕಾರ್ಯದೊಳು | ವರಸಹಕಾರಿಯಾಗಿರಿಸಲು ಯಶವು | ಕರತಲದೊಳು
ತಾ ತೋರ್ಪುದು ಸುರಸೌಖ್ಯವು ದೊರೆಯುವದು || ೧ ||

ನಿಮ್ಮಂಥ ಪ್ರೌಢವಿಚಾರವುಳ್ಳ ಜನರು ಈ ಬಗೆಯ ಕ್ಷುದ್ರ ವಿಕಾರಗಳಿಗೆ ಒಳಗಾಗಬಾರದು. ವಸಂತರಾವ, ಶಾರೀರಿಕ ಸುಖಲಾಲಸೆಯಿಂದ ಹುಟ್ಟುವ ಈ ವಿಕಾರಗಳಿಗೆ ಪ್ರೇಮವೆನ್ನುವದಾದರೂ ಹೇಗೆ?

ವಸಂತ—ಇದೇ ಪ್ರೇಮಸನ್ಯಾಸವೇ ಕೊನೆಯ ವರೆಗೂ ಇರುವದಾದರೆ ನಾನು ಮಾಡತಕ್ಕದ್ದಾದರೂ ಏನು?

ಕಮಲಾ—ನಿಮಗೆ ವಸ್ತುಸ್ಥಿತಿಯು ಗೊತ್ತಿದ್ದೂ ಇದ್ದು ಪುನಃ ಪುನಃ ಈ ವಿಷಯವನ್ನು ತೆಗೆದು ಮನಸ್ಸನ್ನು ಖಿನ್ನ ಮಾಡಿಕೊಳ್ಳುವದರಲ್ಲಿ ಯಾವ ಪುರುಷಾರ್ಥವೋ ಕಾಣೆ !

ವಸಂತ—ಕಮಲಾವತೀ, ಇದಕ್ಕೆ ನಿನ್ನ ಒಪ್ಪಿಗೆಯಿದ್ದರೆ ನಾನೇ ನಿಮ್ಮ ತಾಯಿಯನ್ನು ವಿಚಾರಿಸುತ್ತೇನೆ.

ಕಮಲಾ—ಛೇ ಛೇ, ಸುಮ್ಮನೆ ಇಲ್ಲದ ಸಂಕಟವನ್ನು ತಂದುಕೊಂಡೀರಿ. ಡಾಕ್ಟರ, ನೀವು ಶರೀರಪರೀಕ್ಷೆಯಲ್ಲಿ ಮಾತ್ರ ನಿಪುಣರು; ಮನಸ್ಸಿನ ನಿದಾನವು ನಿಮಗೆ ತಿಳಿಯುವದಿಲ್ಲ. ನನ್ನ ತಾಯಿಯ ಸ್ವಭಾವವು ಸಂಪೂರ್ಣವಾಗಿ ನಿಮಗೆ ತಿಳಿದಿದ್ದರೂ ತಿರುತಿರುಗಿ ನೀವು ತಪ್ಪು ಮಾಡುವದನ್ನು ನೋಡಿ ನನಗೆ ಆಶ್ಚರ್ಯವೆನಿಸುತ್ತದೆ. ನೀವು ಹೀಗೆಯೇ ಸುದಾಮನಂತಿದ್ದರೆ ನಮ್ಮ ಲಗ್ನಕ್ಕೆ ತಾಯಿಯ ಒಪ್ಪಿಗೆಯು ಸಿಗುವದು ಸ್ವಪ್ನದಲ್ಲಾದರೂ ಶಕ್ಯವಿರುವದೇ?

ವಸಂತ—ಅದೇಕೆ? ನಮ್ಮಿಬ್ಬರ ಲಗ್ನದ ನಡುವೆ ಅಡ್ಡ ಬರುವ ಅಂಥ ಹಿಮಾಲಯ-ಪರ್ವತವಾದರೂ ಯಾವದು?

ಕಮಲಾ—ತಿಳಿದೂ ತಿಳಿದೂ ನಿಮ್ಮಂಥವರು ಅಡ್ಡಹಾದಿ ತುಳಿದರೆ ನಾವು ಹೆಂಗಸರು ಮಾಡುವದೇನು?

ವಸಂತ—ಪದ—ಶಿವ ಶಿವ ಜನ್ಮ

ತವಕರ ಪಿಡಿಯುವೆ | ಬುವಿಯೊಳ್ ಸುಖವ | ಜವದೆ ಪಡೆಯುವೆ || ಮೋಹಾಕರೆ ಸುರಸತಿ ಶೃಂಗಾರೆ | ದಾಹ ವಿದೂರೆ ಸುಗುಣಾಧಾರೆ ||೧|| ವಿರಹಾನಲದೊಳ್ ಸುಡುತಿಹ ತನುವ | ಕರುಣಾಜಲ ಸೇಚನದೆ ಪೊರೆವುದು || ೨ ||

ಹೃದಯದೇವತೇ, ನಿನ್ನ ಮನಸ್ಸಿಗೆ ದುಃಖವನ್ನುಂಟುಮಾಡುವ ಕೆಲಸವನ್ನೆಂದೂ ಮಾಡುವದಿಲ್ಲ. ಆದರೆ ನಾನಾದರೂ ಏನು ಮಾಡಲಿ? ಹಗಲು-ರಾತ್ರಿ ನಿನ್ನ ವಿರಹಕಾಲದ ತಾಪಗಳನ್ನು ಸಹಿಸಿ, ಸಹಿಸಿ ಜೀವಿಸುವದು ಸಹ ಬೇಸರವಾಗಿದೆ. ಇದೊಂದೇ ವಿಚಾರದಿಂದ ತಲೆಯು ತುಂಬಹೋಗಿರುವದರಿಂದ ಬೇರೆ ಕೆಲಸಕ್ಕೆ ಬುದ್ಧಿಯೇ ಹರಿಯುವಂತಿಲ್ಲ. ಇಲ್ಲದ ಸಲ್ಲದ ಕಲ್ಪನಾ ವಿಕಲ್ಪನೆಗಳಿಂದ ದೇಹವು ಸವೆಯಹತ್ತಿರುವದು. ಕಮಲಾವತೀ, ನಮ್ಮಿಬ್ಬರ ಪ್ರೇಮದ ಅಂತರಂಗಗಳು ಒಂದಾಗಿಹೋಗಿದ್ದರೂ ಜನದೃಷ್ಟಿಯಿಂದ ಅದಕ್ಕೆ ಸಮ್ಮತಿಯು ದೊರೆತ ಹೊರತು ಈ ನಿರ್ಭಾಗ್ಯ ಆತ್ಮದ ತಳಮಳವು ಶಾಂತವಾಗಲಾರದು.

ಕಮ—ವಸಂತರಾವ, ನಿಮ್ಮ ಹೃದಯವು ನನಗೆ ತಿಳಿಯದೆ ಹೋಗಿದ್ದರೆ, ನನ್ನ ಮೇಲೆ ನಿಮ್ಮ ಪ್ರೇಮವೇ ಇಲ್ಲವೆಂದು ಸಹಜವಾಗಿ ತಿಳಿದುಬಿಡುತ್ತಿದ್ದೆನು. ನಿಮ್ಮ ಸಹಧರ್ಮಚಾರಿಣಿಯಾಗಿ ನಾಲ್ಕು ಜನರಲ್ಲಿ ಮೆರೆಯಬೇಕೆಂಬ ಉತ್ಸಾಹವು ನನಗಿರಲಿಕ್ಕಿಲ್ಲವೇ? ಆದರೇನು ಮಾಡಲಿ? ಹೇಗೆ ಬಾಲ್ಯ-ಯೌವನ-ವಾರ್ಧಕ್ಯ ಎಂಬ ಮೂರು ಅವಸ್ಥೆಗಳಿರುವವೋ ಆ ಆ ಅವಸ್ಥೆಗಳಿಗೆ ತಕ್ಕಂತೆ ಸ್ತ್ರೀಯು ಬಾಲ್ಯದಲ್ಲಿ ಮಾತಾ-ಪಿತೃಗಳ ಆಧೀನದಲ್ಲಿಯೂ, ಯೌವನದಲ್ಲಿ ಪತಿಯ ಅಂಕಿತ

ದಲ್ಲಿಯೂ, ವಾರ್ಧಕ್ಯದಲ್ಲಿ ಪುತ್ರರ ಪೇಳಿಕೆಯಂತೆಯೂ ಇರಬೇಕೆಂದು ನೀತಿ ಶಾಸ್ತ್ರವು ಹೇಳುತ್ತದೆ. ನನ್ನ ಸ್ವಂತದ ಅಧಿಕಾರದಲ್ಲಿರುವ ಪ್ರೇಮವನ್ನು ಈ ಮೊದಲೇ ನಿಮಗೆ ಅರ್ಪಿಸಿಬಿಟ್ಟಿದ್ದೇನೆ. ಆದರೆ ಈ ದೇಹದ ಕ್ರಯ-ವಿಕ್ರಯವನ್ನು ಮಾಡುವವಳು ನನ್ನ ತಾಯಿಯು; ನನಗೆ ಇದುವರೆಗೆ ನನ್ನ ಭಾರವನ್ನು ಹೊತ್ತು ಹೆತ್ತು ಸಾಕಿ ಸಲುಹಿ ದೊಡ್ಡವಳನ್ನು ಮಾಡಿದ ಮಾತೃದೇವತೆಯು! ಆಕೆಯ ಅಪ್ಪಣೆಯಿಲ್ಲದೆ ಆಕೆಯ ವಸ್ತುವಾದ ಈ ದೇಹವನ್ನು ನಾನು ನಿಮಗೆ ಹೇಗೆ ಕೊಡಲಿ? ಮತ್ತು ಆ ದೇವತೆಯ ಮಂಗಲಾಶೀರ್ವಾದವಿಲ್ಲದೆ ಸಂಸಾರ ದಲ್ಲಿ ಸುಖವಾದರೂ ಹೇಗೆ ಸಿಗುವದು?

ವಸಂತ—ಅಹಾಹಾ! ಕಮಲೇ, ನಿನ್ನ ಈ ನೀತಿವಾದವನ್ನು ಕೇಳಿ ಎಂಥ ಮೂಢನೂ ಬುದ್ಧಿಗಲಿಯಬಹುದು. ಆದರೆ, ನಾನೇನು ಮಾಡಿದರೆ ನಿನ್ನ ತಾಯಿ ಯು ಸಂತುಷ್ಟಳಾಗುವಳೆಂದು ದಯಮಾಡಿ ಹೇಳುವೆಯಾ?

ಕಮಲಾ—ಡಾಕ್ಟರ, ಆಕೆಯು ಹೇಗಿದ್ದರೂ ನನ್ನ ತಾಯಿಯೇ. ಈ ಜನ್ಮ ದಲ್ಲಿಯೇ ಈ ನಾಲಿಗೆಯಿಂದಲೇ ಅದನ್ನು ಹೇಳುವದೆಂದರೆ, ಮಾನ-ಮರ್ಯಾದೆಯ ಆಶೆಗಾಗಿ ಸರಕಾರದ ಬೆನ್ನು ಬಡಿದು ದೇಶದ್ರೋಹ ಮಾಡಿದಂತೆಯೇ ಸರಿ! ನಿಮ್ಮ ಸಮಾಧಾನಕ್ಕಾಗಿಯೂ ಮತ್ತು ನಿಮ್ಮ ಮೇಲಿನ ನಿರ್ಮಲ ಪ್ರೇಮಕ್ಕಾ ಗಿಯೂ ಹೇಳುತ್ತೇನೆ ಕೇಳಿರಿ. ನನ್ನ ತಾಯಿಗೆ ಮೊದಲಿನಿಂದಲೂ ಊಟ-ಉಡಿಗೆ ಗಳಲ್ಲಿ ಸಹ ಐಷಆರಾಮಿನಮೇಲೆ ಪ್ರೀತಿ ಬಹಳ. ಆದುದರಿಂದ ಅವೆಲ್ಲವನ್ನು ಪೂರಯಿಸಿಕೊಡುವ ದುಡ್ಡಿನ ಹೊರತಾಗಿ ಆಕೆಗೆ ಬೇರೆ ಕಡೆಗೆ ಲಕ್ಷವಿಲ್ಲ. ಈಗ ಆಕೆಗೆ ಸುಮಾರು ೪೦ ವರ್ಷಗಳು ಗತಿಸಿಹೋಗಿದ್ದರೂ, ಇನ್ನು ಜರಿ-ಸೀರಿ ಕುಪ್ಪಸಗಳನ್ನುಟ್ಟು, ಮತ್ತು ಬಂಗಾರದ ಆಭರಣಗಳನ್ನಿಟ್ಟುಕೊಂಡು ನಾಲ್ಕು ಜನರಲ್ಲಿ ಮೆರೆಯಬೇಕೆಂಬ ಮಹತ್ವಾಕಾಂಕ್ಷೆಯು ಹೋಗಿಲ್ಲ. ಇದು ಕದಾ ಚಿತ್ ಆಕೆಯ ದೋಷವಿದ್ದರೂ, ಬಹು ಜನರ ಮನಸ್ಸಿನ ಒಲವು ಹೀಗೆಯೇ ಇರುತ್ತದೆ.

ವಸಂತ—ಆದರೆ ಆಕೆಯ ಶ್ರೀಮಂತಿಕೆಯ ಸೊಬಗಿಗೂ ನಮ್ಮ ಲಗ್ನಕ್ಕೂ ಸಂಬಂಧವೇನು?

ಕಮಲಾ—ಇಷ್ಟು ಸಹ ತಿಳಿಯುವದಿಲ್ಲವೇ? ತನ್ನ ಕೈಯಲ್ಲಿ ದುಡ್ಡಿಲ್ಲ ದಿದ್ದರೂ ಶ್ರೀಮಂತಿಕೆಯ ಸೊಬಗಿನಿಂದ ಮೆರೆಯಬೇಕೆಂಬ ಇಚ್ಛೆಯಿದ್ದಮೇಲೆ ಅಳಿಯನು ಶ್ರೀಮಂತನೇ ಇರಬೇಕಾಗುವದು. ಆದರೆ ಇಷ್ಟರಿಂದ ನನ್ನ ಪ್ರೇ

ಮದ ಒಗ್ಗೆ ಅಧೀರರಾಗುವ ಕಾರಣವಿಲ್ಲ. ಒಬ್ಬ ಮೃತ್ಯುವಿನ ಹೊರತು ನಮ್ಮಿಬ್ಬರ ಆತ್ಮಗಳನ್ನು ಸಂಬಂಧಿಸಿದ ಪ್ರೇಮತಂತುವನ್ನು ಹರಿಯುವ ಶಕ್ತಿಯು ಬೇರೆ ಯಾರಲ್ಲಿಯೂ ಇಲ್ಲ. ನೀವು ಚನ್ನಾಗಿ ನಿಮ್ಮ ಡಾಕ್ಟರ ಕೆಲಸವನ್ನು ನಡೆಯಿಸಿ ಜನರಲ್ಲಿ ಪ್ರಸಿದ್ಧಿಯನ್ನು ಹೊಂದಿ ನಾಲ್ಕು ದುಡ್ಡು ಸಂಪಾದನ ಮಾಡಿರಿ. ಆ ಮೇಲೆ ತಾಯಿಯು ಹತ್ತರ ನಮ್ಮ ಲಗ್ನದ ಸುದ್ದಿಯನ್ನೆತ್ತಿದರೆ ತಾನಾಗಿಯೇ ಒಪ್ಪಿಗೆಯನ್ನು ಕೊಡುವಳು.

ವಸಂತ—ಕಮಲಾವತೀ, ಡಾಕ್ಟರ ಪರೀಕ್ಷೆಯಾಗಿ ಇನ್ನೂ ಒಂದು ತಿಂಗಳು ಸಹ ಆಗಿಲ್ಲ. ಇಷ್ಟರಲ್ಲಿಯೇ ಪ್ರಾಕ್ಟೀಸ ನಡೆಯಿಸಿ ಇಂಥ ವಿಷಮ ಪರಿಸ್ಥಿತಿಯಲ್ಲಿ ಒಮ್ಮೆಲೆ ಶ್ರೀಮಂತನಾಗುವದಾದರೂ ಹೇಗೆ?

ಕಮಲಾ—ಯಾರಿಗೆ ತಮ್ಮ ಕರ್ತೃತ್ವದ ಮೇಲೆ ವಿಶ್ವಾಸವಿಲ್ಲವೋ ಅಂಥವರಿಂದ ಯಾವ ಕೆಲಸವೂ ಆಗಲಾರದು. ನಿಮ್ಮ ಸ್ಥಿತಿಯೇ ನಿಮಗೆ ಭಾರವಾಗಿರುವಾಗ ಬಳಲುತ್ತಿರುವ ಭಾರತಮಾತೆಯನ್ನುದ್ಧರಿಸುವ ತರುಣರು ನೀವೇ ಏನು?

ವಸಂತ—ಹುಚ್ಚೀ ಹಾಗಲ್ಲ. ಸದ್ಯಃಪರಿಸ್ಥಿತಿಯು ಎಂಥ ಪೋಟಾಪೋಟಿಯ ಕಾಲವೆಂಬದು ನಿನಗೆ ಗೊತ್ತಿಲ್ಲ. ಈಗಿನ ಕಾಲದಲ್ಲಿ ಡಾಕ್ಟರ ಅಥವಾ ವಕೀಲನಾಗುವದಕ್ಕಿಂತ ಕೂಲಿಮಾಡುವದು ಹಿತಕರವಾಗಿ ತೋರುತ್ತದೆ. ಹೊಟ್ಟೆಗೆ ಸಿಗುವದು ಹಾಗಿರಲಿ, ಬರೇ ಪ್ರವಾಸದ ಖರ್ಚುಸಹ ಸಿಗುವದಿಲ್ಲ. ಅರ್ಧ ಚಾರ್ಜಿಗೆ ಔಷಧಕೊಡುತ್ತೇವೆಂದರೂ ಯಾರೂ ಹಣಿಕಿಹಾಕುವದಿಲ್ಲ.

ಕಮಲಾ—ಛೇ ಛೇ! ಇಂಥ ಸ್ಪರ್ಧೆಗೆ ಹೆದರಿ ಕೈಕಾಲುಬಿಡುವದು ಗಂಡಸಿನ ಲಕ್ಷಣವಲ್ಲ. ಎಲ್ಲಿ ಬಿದ್ದರೂ ಕಸ್ತೂರಿಗೆ ವಾಸನೆಯು ತಪ್ಪುವದಿಲ್ಲ. ಎರೆ ಮಣ್ಣನ್ನು ಯಾವ ಕಾಜಿನ ಪಾತ್ರೆಯಲ್ಲಿಟ್ಟರೂ ವಾಸನೆಯೆಲ್ಲಿಂದ ಬರುವದು? ಕರ್ತವ್ಯವನ್ನು ಸ್ಮರಿಸಿ ಮನಮುಟ್ಟಿ ಪ್ರಯತ್ನಮಾಡಲಿಕ್ಕೇಬೇಕು. ಆ ಮೇಲೆ ಪರಮೇಶ್ವರನಿದ್ದೇ ಇದ್ದಾನೆ.

ವಸಂತ—ಅಂತೂ ನಿನ್ನ ತಲೆಯಲ್ಲಿಯೂ ಶ್ರೀಮಂತಿಕೆಯ ಪಿಶಾಚಿಯೇ ಸುಳಿದಾಡುತ್ತದೆ.

ಕಮಲಾ—ಇಲ್ಲ, ಎಳ್ಳಷ್ಟೂ ಇಲ್ಲ. ವಸಂತರಾವ, ನಿಜವಾದ ಪ್ರೇಮಕ್ಕೆ ಮುರುಕ ಗುಡಿಸಲೇನು, ಅರಮನೆಯೇನು? ಪಟ್ಟಣವಾಸವೇನು, ವನವಾಸವೇನು? ಎಲ್ಲವೂ ಒಂದೇ. ದುರ್ದೈವದ ಬಲೆಯಲ್ಲಿ ಸಿಕ್ಕ ಪತಿಯನ್ನನುಸರಿಸಿ

ವನವನಗಳಲ್ಲಿ ತಿರುಗಲಿಕ್ಕೆ ಸಹ ಆರ್ಯಸ್ತ್ರೀಯು ಹಿಂಜರಿಯುವದಿಲ್ಲವೆಂಬದನ್ನು ನಿಮಗೆ ಹೇಳಬೇಕೇ? ಆದರೆ ಕೇವಲ ತಾಯಿಯ ಆಶಾಪೂರ್ತಿಗಾಗಿ ಕೆಲದಿವಸ ಈ ವಿವಾಹ ವಿಷಯುವನ್ನು ಮುಂದೆ ಹಾಕಿ ಒಂದೇ ವಿಷಯದ ಕಡೆಗೆ ಲಕ್ಷ್ಯ ಹಚ್ಚಲಿಕ್ಕೆ ನಿಮಗೆ ಹೇಳಿದೆನಿಷ್ಟೇ. ನಿಮಗೆ ಇದರಿಂದ ಖೇದವಾಗುತ್ತಿದ್ದರೆ ಇನ್ನೊಂದಕ್ಷರವನ್ನು ಸಹ ಹೆಚ್ಚಿಗೆ ಮಾತಾಡುವದಿಲ್ಲ.

ವಸಂತ—ಕಮಲಾವತಿ, ನಿನ್ನ ಪ್ರೇಮದ ಬಗ್ಗೆ ಸಂಪೂರ್ಣ ವಿಶ್ವಾಸವದೆ. ಆದರೆ ನಮ್ಮ ದುರ್ದೈವದ ಬಲದಿಂದ ನಡುವೇ ಯಾವನೊಬ್ಬ ಧನಕನಕಸಂಪನ್ನನಾದ ರಾಜಶ್ಯಾಲಕನು ಬಂದು ನಿಮ್ಮ ತಾಯಿಯನ್ನು ಕೇಳಿದರೆ?

ಕಮಲಾ—ಆಕೆಯು ಮಗಳ ಜನ್ಮವನ್ನು ಎಂದೂ ಮಣ್ಣುಮಾಡಲಿಕ್ಕಿಲ್ಲ!

ವಸಂತ—ಆದರೆ ಕಮಲಾ, ಇಷ್ಟೆಲ್ಲ ಮಾತಾಡಲಿಕ್ಕೆ ನಾನೇನು ಹುಚ್ಚನೆಂದು ತಿಳಿಯಬೇಡ. ರಾವಬಹದ್ದೂರ ವಿನಾಯಕರಾವ ವಿಶಾಲೋದರ ಇವರ ಬಗ್ಗೆ ಏನೇನೋ ಸುದ್ದಿಗಳು ಬರಹತ್ತಿವೆ! ಒಂದು ವೇಳೆ ಅವರು....

ಕಮಲಾ—ನಿಮ್ಮ ಕಲ್ಪನೆಗೆ ಏನೆನ್ನಬೇಕು? ಸಂಸಾರಯಾತ್ರೆಯನ್ನು ಮುಗಿಸಿ ಸ್ಮಶಾನ ಯಾತ್ರೆಗೆ ಸಿದ್ಧನಾಗುತ್ತಿರುವ ವೃದ್ಧ ವಿನಾಯಕರಾಯರ ಕೊರಳಿಗೆ ಮಗಳನ್ನು ಕಟ್ಟಿ ಮರುದಿವಸವೇ ಅವಳ ಹಣೆಯ ಕುಂಕುಮವನ್ನೊರಿಸುವ ದುರ್ಬುದ್ಧಿಯು ಯಾವ ತಾಯಿಗಾದರೂ ಹುಟ್ಟಬಹುದೇ?

ವಸಂತ—ಧನವೇ ಯಾರ ಜೀವನವಾಗಿರುವದೋ ಅವರ ಕೈಯಿಂದ ಏನಾಗಲಿಕ್ಕಿಲ್ಲ? ಇದಲ್ಲದೆ ಇತ್ತೀಚೆಗೆ ವಿನಾಯಕರಾಯರ ಮನೆಗೆ ನಿನ್ನ ತಾಯಿಯ ಹೋಗಬರುವದು ಹೆಚ್ಚಾಗಿದೆ.

ಕಮಲಾ—ವಿನಾಯಕರಾಯರಲ್ಲಿ ಹೋಗಿಬಂದ ಮಾತ್ರಕ್ಕೇ ಅರವತ್ತು ವರ್ಷದ ಮುದುಕನಿಗೆ ಮಗಳನ್ನು ಕೊಟ್ಟು ಮದುವೆಮಾಡುವ ತಾಯಿಯಂತೂ ಈ ಜಗತ್ತಿನಲ್ಲಿದ್ದಾಳೆಂದು ನಾನು ನಂಬುವದಿಲ್ಲ.

ವಸಂತ—ಅದೇಕೆ? ಹನ್ನೆರಡು ವರ್ಷದ ಕುವರಿಯನ್ನು ಲಗ್ನಮಾಡಿಕೊಂಡ ಮುದಿಕಪಿಗಳು ಎಷ್ಟು ಜನರಿಲ್ಲ? ಈಗ ಕಾಲವೇ ಬದಲಾಗಿ ಹೋಗಿದೆ. ಅದಲ್ಲದೆ, ಈ ವಿನಾಯಕರಾಯರೆಂದರೆ ಜನರಲ್ಲಿ ಮಾನಮರ್ಯಾದೆಯುಳ್ಳವರು. ರಾವಬಹದ್ದೂರ ಪದವಿಯುಳ್ಳವರು, ಸರಕಾರದಲ್ಲಿಯೂ ಪರಿಚಯವುಳ್ಳವರು; ಮೇಲಾಗಿ ಶ್ರೀಮಂತರು. ಇಂಥವರಿಗೆ ಎಷ್ಟು ವಯಸ್ಸಾದರೇನು? ತಮ್ಮ ಹೆಣ್ಣು ಮಕ್ಕಳನ್ನು ಕೊಡಲು ಎಷ್ಟು ಜನರು ಕೈಯಲ್ಲಿ ತಿಲೋದಕವನ್ನು ಹಿಡಿ

ದಿರುವರೋ ಏನೋ!

ಕಮಲಾ—ಹಾಗಲ್ಲ ರಾಯರೇ,

ಪದ—ನಾರಿಯರಿಗೆ ಪತಿಯೆ ಸಕಲ ಸೌಭಾಗ್ಯವು | ಧಾರಿಣಿಯೊಳು ಪತಿ ವಿಹೀನತೆಯೆ ನರಕವು || ಪಲ್ಲ || ಪತಿಧರ್ಮವೇ ಸತಿಯ | ರತಿ ಮೌಲ್ಯವಾದಾಭರಣ | ಹತಭರ್ತೃಕಾಜೀವನ | ಮರಣಕೆ ಸಮಾನ ||೧|| ಸತಿಪತಿಯರನುರೂಪ | ಜೊತೆಯಿಂದ ದೇಶದು | ನ್ನತಿಮಾಳ್ಪ ಸುತರುದಿಸಿ | ಸುಖಬಡಿಪರು || ೨ ||

ನನ್ನ ತಾಯಿಗೆ ಮಾತ್ರ ಯಾರು ಎಷ್ಟು ಧನದಾಶೆಯನ್ನು ತೋರಿಸಿದರೂ ಮಗಳ ಕೊರಳಿಗೆ ಕಲ್ಲುಕಟ್ಟಿ ಭಾವಿಯಲ್ಲಿ ನೂಕಲಿಕ್ಕಿಲ್ಲ! ಡಾಕ್ಟರ, ಸುಮ್ಮನೆ ಈ ವಿಷಯವನ್ನು ಬೆಳೆಸಿ ಮನಸ್ಸಿಗೆ ವಿಷಾದಮಾಡಿಕೊಳ್ಳುವ ಕಾರಣವಿಲ್ಲ. ಇಗೋ ಹಿಡಿಯಿರಿ ವಚನವನ್ನು-ಜಗತ್ತಿನಲ್ಲಿ ಎಲ್ಲ ಸಂಕಟಗಳೂ ಒಟ್ಟಾಗಿ ನನ್ನ ತಲೆಯಮೇಲೆ ಬಿದ್ದರೂ ಈ ಕಮಲಾವತಿಯು ನಿಮ್ಮವಳೇ, ಎಂದು ತಿಳಿಯಿರಿ.

ವಸಂತ—ಆಃ! ಇದು ನಿಜವೇ, ಸತ್ಯವೇ?

ಕಮ:—ನಿಜ! ಸತ್ಯ! ತ್ರಿವಾರ ಸತ್ಯ !! ಛೀ ಛೀ! ಪುರುಷರ ಮನಸ್ಸು ಚಂಚಲವೆಂಬದು ಸುಳ್ಳಲ್ಲ!

ವಸಂತ:—ಆದ್ದರಿಂದಲೇ ಚಂಚಲಪುರುಷನಿಗೆ ಸಂಸಾರ ನಡೆಸಲಿಕ್ಕೆ ಪತ್ನಿಯ ಸ್ಥಿರವಾದ ಆಧಾರವು ಬೇಕಾಗುತ್ತದೆ.

ಕಮಲಾ:—ಒಳ್ಳೇದು ವೇಳೆಯಾಯಿತು. ಇನ್ನು ಹೊರಡುವದಿಲ್ಲವೇ?

ವಸಂತ:—ನನ್ನ ಜೀವವೆ! ಎಂಟುದಿವಸಗಳಲ್ಲಿ ಎಂದೋ ಒಂದುಸಾರೆ ಭೆಟ್ಟಿಯಾದಾಗ ಇಷ್ಟು ಅವಸರವೇಕೆ?

ಕಮಲಾ:—ವಿರಹಕಾಲದಲ್ಲಿಯೇ ಪ್ರೇಮವು ಬಲವಾಗಿ ಅಂಕುರಿಸುತ್ತದೆ.

ವಸಂತ:—ನಿಜ-ಆಃ!

ಪದ—ಸುಗುಣಾಧಾರೆ | ಮುದವಾ ಬೀರೆ || ಪಲ್ಲ ||

ಕರಿವರಗಾಮಿನಿ| ಪರಭೃತವಾಣಿ|ಸುರನಾರಿ ಸಮರೂಪಿಣಿ ಸುಗುಣಿ ||೧|| ವಿರಹಾನಲದೊ | ಳುರೆ ಕಾಯ್ದು ಸುಪ್ರೇಮ | ವರಕಾಂಚನವು ಮೆರೆಯುವದು ನಿರುತ||೨||

ವಸ:—ಕಮಲಾವತೀ, ಈಗಲೀಗ ಮನಸ್ಸಿಗೆ ಶಾಂತವಾಯಿತು. ನಿನ್ನ ಹೇಳಿಕೆಯಂತೆ ಮನಃಪೂರ್ವಕವಾಗಿ ಪ್ರ್ಯಾಕ್ಟೀಸು ನಡೆಯಿಸಿ ನಿನ್ನ ತಾಯಿಯ ಬಳಿಯಲ್ಲಿ ಈ ಬೇಡಿಕೆಯನ್ನಿಡುವೆನು. ಆಯಿತೋ ಇಲ್ಲವೋ? ಆ ಮೇಲೆಯಾದರೂ ಈ ಮೋಹನಮಾಲೆಯು ಈ ಕೊರಳಿಗೆ ಬೀಳಬಹುದು............

## ಪ್ರವೇಶ—೩

ರಸ್ತೆ:—ರಾ. ಬ. ವಿನಾಯಕರಾಯರು ಬರುವರು.

ವಿನಾಯಕ—ಪದ—ಆ ನವತರುಣಿಯನು ಪಡೆಯೆ | ಮನವು ಘನತಾಪದೊಳಗಿಹುದು || ಪಲ್ಲ || ತಾರುಣ್ಯಹೀನ ವಾದೀದೇಹವನು | ವಾರಿಜ ಮುಖಿಯು ತಾ | ಕಾರುಣ್ಯದೀಗಲೆನ್ನ | ಪರಿಗ್ರಹಿಪಳೊ ಜರಿಯುತಿಹಳೊ || ೧ ||

ಕಮಲಾವತಿಯ ಮನಸ್ಸನ್ನೊಲಿಸುವದಕ್ಕಾಗಿ ಇಷ್ಟೆಲ್ಲ ಸಿದ್ಧವಾಗಿ ಬಂದೆನು. ದುಡ್ಡು ಕೊಟ್ಟು ತರಲಿಕ್ಕೆ ಸಾಧ್ಯವಿದ್ದದ್ದೆಲ್ಲವನ್ನೂ ತಂದಾಯಿತು. ಆದರೆ ಈ ಮುಪ್ಪಿನ ಕಾಲದಲ್ಲಿ ತಾರುಣ್ಯವನ್ನೆಲ್ಲಿಂದ ತರಲಿ? ಒಂದು ದೃಷ್ಟಿಯಿಂದ ನಾವು ಈ ಮುಪ್ಪಿನ ಕಾಲದಲ್ಲಿ ಮದುವೆಯನ್ನು ಬಯಸಲೇ ಬಾರದು; ಆದರೆ ಈ ರಾವಬಹಾದ್ದೂರರಿಗೆ ಸರಿಯಾಗಿ ಮನೆಯಲ್ಲಿ ಬ್ಯೂಟಿಫುಲ್ಲ ವಾಯಿಫ ಇರಲಿಕ್ಕೆ ಬೇಕು. ಇದಕ್ಕಾಗಿ ಆ ರಮಾಬಾಯಿಗೆ ದುಡ್ಡಿನ ಆಮಿಷ ಹಚ್ಚಿ ಸಂಪೂರ್ಣ ನನ್ನ ಕೈಯೊಳಗೆ ಎಳಕೊಂಡಿದ್ದೇನೆ. ಒಂದುವೇಳೆ ಅವಳು ಒಪ್ಪದಿದ್ದರೆ ತಾಯಿ ಮಕ್ಕಳಿಬ್ಬರಿಗೂ ನೆಟ್ಟಗೆ ತುರಂಗದ ದಾರಿಯನ್ನು ತೋರಿಸುತ್ತೇನೆ. ದುಡ್ಡುಕೊಟ್ಟರೆ ಸರಕಾರದಲ್ಲಿ ನನ್ನಂತೆ ನೂರಾರು ಸಾಕ್ಷಿಗಳು ಸಿಗುವವು. ಇರಲಿ, ಈಗಲೇ ಆ ವಿಚಾರವೇಕೆ? (ನೋಡಿ) ಇವರೆಲ್ಲಿಂದ ಬಂದರು ಬಿಳೀ ಟೊಪ್ಪಿಗೆಯವರು! ನಮ್ಮಂಥವರನ್ನು ಕಂಡರೆ ಇವರ ತಲೆಯೇ ತಿರುಗುತ್ತದೆ. ಓಹೋ! ದೇ. ಭ. ವಿಶ್ವಾಸರಾವ ಸಬನೀಸ ವಕೀಲರು.

ವಿಶ್ವಾ (ಮನಸ್ಸಿನಲ್ಲಿ)—ಅಂತೂ ನಾನು ಕೇಳಿದ ಸಂಗತಿಯು ನಿಜ. ನೋಡಿರಿ ಹೇಗಿದೆ ಅವತಾರವು? ಮೋರೆಯು ಪಿಂಜಾರ ಅಂಗಳವಾಗಿ ಹೋಗಿದ್ದರೂ ಕಲಪುಹಚ್ಚಿ ಮೀಸೆಯನ್ನು ಕಪ್ಪ ಮಾಡಿದ್ದಾರೆ. ತಲೆಗೂ ಅದೇ ಅವಸ್ಥೆ. ಜನರು ಹೇಸಿಕೊಳ್ಳಬಾರದೆಂದು ಮೈಗೆ ಅತ್ತರು ಅರಿಷ್ಟಗಳು. ಕಾಲುಗಳ ನಿಸ್ಸತ್ವವು ಕಾಣಬಾರದೆಂದು ಇಂಥ ಬಿಸಿಲಿನಲ್ಲಿಯೂ ಬೂಟು ಸ್ಟಾಕಿಂಗ್ಸ ಪ್ಯಾಂಟುಗಳು. ಮೈಮೇಲೆಯಂತೂ ಒಬ್ಬ ಮಾರವಾಡಿಯ ಅಂಗಡಿಯನ್ನೇ ಹಾಕಿಕೊಂಡಿರುವರು. ಸಾಲದುದಕ್ಕೆ ಅಥವಾ ಜೋಲಿಯನ್ನು ಹಿಡಿಯಲಿಕ್ಕೆ ಕೈಯಲ್ಲಿ ಕಟ್ಟಿಗೆ. ಕೆಲಸವಿಲ್ಲದಿದ್ದರೂ ಗಾಣದೆತ್ತಿಗೆ ಹಾಕಿದಂತೆ ಮೇಲೆ ಈ ಚಾಳೀಸು. ಆ ಮೇಲೆ ಶ್ವಾಸವು ಸರಿಯಾಗಿ ಆಗದೆ ಬೇಗನೆ ಮೃತ್ಯುವು ಬರಲೆಂದು ಕೊರಳಿಗೆ ಕಾಲರನೆಕ್ಟಾಯ ಉರುಲುಗಳು. ಪಾಪ! ಆ ಮಹಾತ್ಮರು ಸ್ವದೇಶ ಸ್ವದೇಶವೆಂದು ಒದರಿ ಸಾಯುತ್ತಿದ್ದರೂ ಮುಪ್ಪಿನಿಂದ ಕಿವುಡಾದ ಇವರ ಕಿವಿಗೆ ಆ ಶಬ್ದ

ಗಳೇ ಬಿದ್ದಿಲ್ಲ. ನಿಜವಾಗಿ ದೇಶವನ್ನು ಹಾಳು ಮಾಡುತ್ತಿರುವವರೆಂದರೆ ಇಂಥ ಸುಶಿಕ್ಷಿತರೇ. ಇವರಲ್ಲೇ ಬ್ರಾಹ್ಮಣ-ಬ್ರಾಹ್ಮಣೇತರ, ಇವರಲ್ಲೇ ಸ್ಪೃಶ್ಯಾ-ಸ್ಪೃಶ್ಯ, ಇವರಲ್ಲೇ ಮವಾಳ ಜಹಾಲ, ಇವರಲ್ಲೇ ಸ್ವದೇಶಿ ಪರದೇಶಿ, ಇವರಲ್ಲೇ ಹಿಂದು ಮುಸಲ್ಮಾನ! ಪಾಪ ಅಶಿಕ್ಷಿತ ಹಳ್ಳಿಗಾಡು ಜನರಿಗೆ ಹೇಳುವದೊಂದೇ ತಡ-ಅಥವಾ ಹೇಳುವದಾದರೂ ಏಕೆ ಬೇಕು? ಅವರ ವರ್ತನವೆಲ್ಲ ಕೇವಲ ಸ್ವದೇಶೀಯವಾಗಿಯೇ ಇರುತ್ತದೆ. ಈಗ ಸ್ವಲ್ಪ ಈ ವರನ ಸಮಾಚಾರವನ್ನು ತಕ್ಕೊಳ್ಳೋಣ. (ಪ್ರಕಾಶಂ) ನಮಸ್ಕಾರ ರಾವಬಹಾದ್ದೂರರೇ! ಏನು ಮದುಮಕ್ಕಳಂತೆ ಹೊರಟಿರುವಿರಿ?

ವಿನಾಯಕ—ನಮಸ್ಕಾರ! ಅದೇನೂ ಇಲ್ಲ! ಸ್ವಲ್ಪ ಆಫೀಸಿಗೆ ಹೋಗಬೇಕಾಗಿದೆ.

ವಿಶ್ವಾಸ—ಆಫೀಸು ಈ ದಾರಿಯಲ್ಲಿ ಎಲ್ಲಿದೆ ರಾಯರೇ! ಮತ್ತು ಅಲ್ಲಿಗೆ ಹೋಗಬೇಕಾದರೆ ಇಂಥ ಬಿಸಿಲಿನಲ್ಲಿ ಇಷ್ಟು ಠೀವಿಯೇಕೆ?

ವಿನಾಯಕ—ನಮ್ಮ ನಮ್ಮ ಯೋಗ್ಯತೆಗೆ ತಕ್ಕಂತೆ ಡ್ರೆಸ್ ಮಾಡಬೇಕು. ಇಲ್ಲದಿದ್ದರೆ ಜನರಲ್ಲಿ ಮಾನಮರ್ಯಾದೆ ಸಿಗುವದಿಲ್ಲ.

ವಿಶ್ವಾಸ—ರಾಯರೇ, ಅರಿವೆಗೇ ಮಾನಮರ್ಯಾದೆ ಕೊಡುವದಾದರೆ ನಾಳೆ ಮಾರವಾಡಿಗಳ ಅರಿವೆ ಅಂಗಡಿಗಳಿಗೆ ರಾವಬಾಹದ್ದೂರ ದಿವಾನ ಬಹಾದ್ದೂರ ಪದವಿಯನ್ನು ಕೊಡಲಿಕ್ಕೇನು ಅಡ್ಡಿಯದೆ! ಅಲ್ಲಿಯ ಅರಿವೆಗಳೇ ಅಲ್ಲವೇ ನಿಮ್ಮ ಮೈಮೇಲಿರುವದು? ನೀವು ಈ ಠೀವಿಯನ್ನು ಮಾಡಿಕೊಳ್ಳುವಾಗ ಎಷ್ಟು ಜನರು ಗೋಳಾಡುತ್ತಿರುವರೆಂಬ ಕಲ್ಪನೆ ಮಾಡಿದಿರೇನು? ನಾಲ್ಕುಕೋಟಿ ಜನರು ಎರಡು ದಿವಸಕ್ಕೊಂದು ಸಾರೆ ಅರಹೊಟ್ಟೆ ಉಣ್ಣುತ್ತಿರುವರೆಂಬ ಸುದ್ದಿಯನ್ನು ನೀವು ಕೇಳಿರಲಿಕ್ಕಿಲ್ಲ.

ವಿನಾಯಕ—ಕೈಯಲ್ಲಿ ದುಡ್ಡಿಲ್ಲದ ಮೇಲೆ ಬಡತನಕ್ಕೆ ತಕ್ಕಂತೆ ಇರಬೇಕಾಗುವದು. ಅವರು ದುಡಿಯುವದೂ ಅಷ್ಟೇ ತಿನ್ನುವದೂ ಅಷ್ಟೇ!

ವಿಶ್ವಾಸ—ಇದನ್ನು ಹೇಳುವ ಪೂರ್ವದಲ್ಲಿ ನೀವು ಯಾರ ದುಡಿತದಿಂದ ಶ್ರೀಮಂತರಾದಿರೆಂಬ ಕಲ್ಪನೆ ಮಾಡಿದಿರೇನು? ನಿಮ್ಮ ಹೊಟ್ಟೆಯನ್ನು ತುಂಬುವದಕ್ಕಾಗಿಯೇ ಆ ಬಡಜನರು ದೇಹವನ್ನು ಸವೆಸುತ್ತಿರುವರು. ಮನೆಯಲ್ಲಿ ಮಂಚದಿಂದ ಮಣೆಗೆ, ಮಣೆಯಿಂದ ಮಂಚಕ್ಕೆ ಅಡ್ಡಾಡುವ ನೀವು ಯಾವ ಕೆಲಸವನ್ನು ಮಾಡಬಲ್ಲಿರಿ? ಹೀಗಿದ್ದ ಮೇಲೆ ಆ ಬಡವರ ಕಡೆಗೆ ಸ್ವಲ್ಪವೂ ಕೃತ

ಜ್ಞಾತೆಯಿಂದ ನೋಡಬಾರದೇ? ಜನಸೇವೆಯನ್ನು ಮಾಡುತ್ತ ಹೋದರೆ ನಿಮಗೆ ಮಾನ ಮರ್ಯಾದೆಗಳಿಗೇನು ಕೊರತೆ? ದಾಸನಲ್ಲವೇ ಈಶನಾಗುವನು? ಶ್ರೀಮಂತಿಕೆಯ ಡ್ರೆಸ್ಸಿನಿಂದ ಎಷ್ಟು ಜನ ಬಡವರ ಬಾಯಲ್ಲಿ ಮಣ್ಣು ಬೀಳುವದು?

ವಿನಾಯಕ—ಅಂದರೆ ನಿಮ್ಮಂತೆ ನಮಗೂ ಈ ಕೈದಿಗಳ ಡ್ರೆಸ್ಸು ಹಾಕಲಿಕ್ಕೆ ಹೇಳುವಿರೇನು?

ವಿಶ್ವಾಸ—ಇಡೀ ಹಿಂದುಸ್ಥಾನವೇ ಪಾರತಂತ್ರ್ಯದಲ್ಲಿ ಬಳಲುತ್ತಿರುವಾಗ ಎಲ್ಲರೂ ಕೈದಿಗಳೇ? ಆ ಕೈದಿಗಳ ಸೆರೆಮನೆಯಾದ ಆ ತುರಂಗದಲ್ಲಿಯೇ ನಮ್ಮ ರಾಷ್ಟ್ರವೀರ ಕೃಷ್ಣಪರಮಾತ್ಮನು ಹುಟ್ಟಲಿಲ್ಲವೇ?

ವಿನಾಯಕ—ವಿಶ್ವಾಸರಾವ, ಈ ಅರಿವೆಯನ್ನು ತೊಟ್ಟರೆ ಮೈಉರಿಯುತ್ತದೆ. ಮತ್ತು ಅದರ ಒಜ್ಜೆಯನ್ನು ಹೊರಲಿಕ್ಕಾಗುವದಿಲ್ಲ.

ವಿಶ್ವಾಸ—ವಾಹಾವ್ಹಾ-ವಾಹವ್ಹಾ! ಎಷ್ಟು ಸೂಕ್ಷ್ಮತನವಿದು? ರಾಯರೇ, ಮೈಮೇಲೆ ಉಕ್ಕಿನ ಅಂಗಿ ಚಿಲಖತ್ತುಗಳನ್ನು ಹಾಕಿಕೊಂಡು ರಣದಲ್ಲಿ ವಾಯುವೇಗದಿಂದ ಸಂಚರಿಸುತ್ತ ಕರ್ನಾಟಕದ ಜಯಭೇರಿಯನ್ನು ಆಸೇತುಹಿಮಾಚಲದ ವರೆಗೆ ಹೊಡಿಸಿದ ಆರ್ಯವೀರರ ವಂಶದವರಲ್ಲವೇ ನೀವು? ಈಗಿನ ಇಂಥ ಗಂಡುಗಲಿಗಳಿರುವರೆಂದೇ ಮೂವತ್ತುಕೋಟಿ ಕುರಿಗಳನ್ನು ೪ ಕೋಟಿ ಜನರು ಆಳುತ್ತಿರುವರು. ರಾಯರೇ ಮೊದಲಿನ ಭರತಖಂಡಕ್ಕೂ, ಚಹಾ ಚುಟ್ಟ ಸಿಗರೇಟ ಬಿಸ್ಕೀಟ ಲಿಮ್ಲೇಟ ಕೋಟ ಹ್ಯಾಟ ಬೂಟು ಪ್ಯಾಂಟುಗಳ ಹಾವಳಿಯಲ್ಲಿ ಈಗಿನ ಭರತಖಂಡಕ್ಕೂ ಎಷ್ಟು ಭೂವ್ಯಾಕಾಶದಷ್ಟು ಅಂತರವಾಗಿದೆಯೆಂದು ಹೇಳಲಿ? (ಭರತಖಂಡದ ಭಾಗ್ಯವೆಲ್ಲ ಎಂಬ ಪದವನ್ನು ತೆರೆಯಲ್ಲಿ ಹಾಡುವರು.) ರಾಯರೇ ಕೇಳಿದಿರಾ? ತಡೆಯಿರಿ ಅವನನ್ನೇ ಕರೆಯುತ್ತೇನೆ. ಏ ದಾಸಯ್ಯಾ, ಬಾ ಇಲ್ಲಿ. (ದಾಸಯ್ಯ ಬರುತ್ತಾನೆ) ನಿನ್ನ ಹೆಸರೇನು?

ದಾಸಯ್ಯ—ನನ್ನ ಹೆಸರು ಗೋವಿಂದಯ್ಯ.

ವಿಶ್ವಾಸ—ಈಗ ಹೇಳಿದ ಲಾವಣಿಯನ್ನು ಹೇಳು. (ದಾಸಯ್ಯ ಹಾಡುತ್ತಾನೆ) ದಾಸಯ್ಯಾ, ನೀನು ಮೈ-ಕೈಯಿಂದ ಗಟ್ಟಿಮುಟ್ಟಾಗಿದ್ದರೂ, ಈ ಕೆಲಸವನ್ನೇಕೆ ಮಾಡುತ್ತಿರುವೆ?

ದಾಸಯ್ಯ—ಹೊಟ್ಟೆಯ ಸಲುವಾಗಿ. ರಾಯರೇ ಏನು ಮಾಡಬೇಕೆಂದರೂ ಕೈಗಾರಿಕೆಯ ಕೆಲಸವೇ ಸಿಗುವದಿಲ್ಲ. ಇಲ್ಲಿಯವರೆಗೆ ಇದ್ದಬಿದ್ದ ಆಸ್ತಿಯು

ನ್ನೆಲ್ಲ ಒತ್ತೀಹಾಕಿ ಅದನ್ನು ಸಾವಕಾರರಿಗೆ ಇಟ್ಟುಬಿಟ್ಟೆನು. ಎಲ್ಲವೂ ಬರಿಗೈಯಾದ ಮೇಲೆ ನಾಚಿಕೆಯನ್ನು ಬಿಟ್ಟು ಈ ಕೆಲಸಕ್ಕೆ ಕೈಹಾಕಿದ್ದೇನೆ.

ವಿಶ್ವಾಸ—(ಸ್ವ) ಆಃ! ಎಷ್ಟು ದೀನಸ್ಥಿತಿಯಿದು. ಕೈಕಾಲುಗಳಿಂದ ಗಟ್ಟಿಮುಟ್ಟಾಗಿರುವ ಈತನಿಗೆ ಹೀಗೆ ಬಿಕ್ಕೆ ಬೇಡಬೇಕೆಂದರೆ ಎಷ್ಟು ದುಃಖವಾಗಿರಬಹುದು! ಹದ್ದು ತಿಂದು ಹಾವು ಹರಿದಾಡುವಂತೆ, ಇಂಥ ಸಾವಿರಾರು ಜನರ ಗೋಣನ್ನು ಮುರಿದು ಶ್ರೀಮಂತರಾದ ಈ ಜನರು ಮುಂದೆ ತಮಗೂ ಇಂಥ ಕಾಲವು ಬರಬಹುದೆಂಬ ಕಲ್ಪನೆಯಿಲ್ಲದೆ ಮನಬಂದಂತೆ ಖರ್ಚು ವೆಚ್ಚವನ್ನು ಬೆಳೆಸುವದಕ್ಕೆ ಏನೆನ್ನಬೇಕು? ಬಹಳವೇನು ಬೇಡ, ನಮ್ಮ ಭರತಖಂಡದಲ್ಲಿಯ ಅರ್ಧದಷ್ಟು ಜನರಾದರೂ ದೇಶೀಯ ಒಡವೆಗಳನ್ನುಪಯೋಗಿಸ ಹತ್ತಿದರೆ, ಇಂಥ ಬಡಜನರಿಗೆ ಸಾಕಷ್ಟು ಅನ್ನವು ಸಿಗುವದು. ಹೀಗಾಗುವದಿಲ್ಲವೆಂದೇ ದೇಶದಲ್ಲಿ ಕಳವು ವ್ಯಭಿಚಾರಗಳು ಬೇಕಾದಷ್ಟು ನಡೆಯ ಹತ್ತಿವೆ.(ಪ್ರ) ದಾಸಯ್ಯಾ ನಿನ್ನ ಮದುವೆಯಾಗಿದೆಯೇನು?

ದಾಸಯ್ಯ—ಇಲ್ಲ ಸ್ವಾಮೀ, ಏನಾದರೂ ಕೊಡಿರಿ.

ವಿಶ್ವಾಸ—ಈ ರಾಯರಲ್ಲಿ ನೌಕರಿಯಿರುತ್ತೀಯೇನು?

ದಾಸಯ್ಯ—ಇಂಥವರೇ ಹಾಳು ಮಾಡಿದರ್‍ರೀ ನನ್ನ ಮೊದಲು.

ವಿಶ್ವಾಸ—ಇರಲಿ. ಈಗ ಇವರಲ್ಲಿ ನೌಕರಿ ಮಾಡುತ್ತ ಇರು ಹೋಗು. ನಿನ್ನ ಮದುವೆ ಸಹ ಮಾಡುವರು.

ವಿನಾಯಕ—ಹೋಗು ನಮ್ಮ ಮನೆಯಲ್ಲಿ ಹೇಳಿದ ಕೆಲಸ ಮಾಡಿಕೊಂಡಿರು. (ದಾಸಯ್ಯ ಹೋಗುತ್ತಾನೆ)

ರಾಯರೇ ಹೇಳಬೇಕೆಂದರೆ ಇನ್ನು ಒಂದೇ ಎರಡೇ; ಈಗ ನಿಮ್ಮನ್ನೇ ಕೇಳುತ್ತೇನೆ. ನೀವು ಈ ಮುಪ್ಪಿನ ವಯಸ್ಸಿನಲ್ಲಿ ಲಗ್ನ ಮಾಡಿಕೊಳ್ಳಬೇಕೆನ್ನುವದು ಸರಿಯೇ? ಚಿಕ್ಕವಯಸ್ಸಿನಲ್ಲಿಯೇ ವಿಧವೆಯರಾದ ಲಕ್ಷಾನುಗಟ್ಟಲೆ ಬಾಲವಿಧವೆಯರು ದುಃಖದಲ್ಲಿ ಹೊರಳಾಡುತ್ತಿರಲು ನೀವು ನಾಲ್ಕನೆಯ ಐದನೆಯ ಲಗ್ನವನ್ನೇಕೆ ಬಯಸಬೇಕು?

ವಿನಾಯಕ—ಧರ್ಮಶಾಸ್ತ್ರವು ವಿಧವಾ ವಿವಾಹಕ್ಕೆ ಒಪ್ಪಿಗೆಯನ್ನು ಕೊಡುವದಿಲ್ಲ.

ವಿಶ್ವಾಸ—ಆ ಶಾಸ್ತ್ರವನ್ನು ಬರೆದವರೂ ನಿಮ್ಮಂತೆಯೇ ಗಂಡಸರು. ಒಂದು ವೇಳೆ ಅದನ್ನೇ ಹೆಂಗಸರು ಬರೆದಿದ್ದರೆ ವಿಧುರ ವಿವಾಹಕ್ಕೆ ಒಪ್ಪಿಗೆಯನ್ನು

ಕೊಡುತ್ತಿದ್ದಿಲ್ಲ.

ವಿನಾಯಕ—ಅವರ ದೈವದಲ್ಲಿಯೇ ಪತಿಸುಖವಿಲ್ಲದ ಮೇಲೆ ನಾವೇಕೆ ಅದಕ್ಕೆ ಪ್ರಯತ್ನಿಸಬೇಕು?

ವಿಶ್ವಾಸ—ನಿಮಗೂ ಪತ್ನೀಸುಖವು ಇಲ್ಲವೆಂದೇ ಪರಮೇಶ್ವರನು ನಿಮ್ಮ ಪತ್ನಿಯನ್ನು ಅಗಲಿಸಿರುವನಲ್ಲವೇ?

ವಿನಾಯಕ—ಆದರೆ ನಾವು ಗಂಡಸರು!

ವಿಶ್ವಾಸ—ಹೌದು ಅವರು ಹೆಂಗಸರು!

ವಿನಾಯಕ--ನಮಗೆ ನಮ್ಮ ಪಶ್ಚಾತ್ ಸಂತತಿಯು ಅವಶ್ಯಕತೆಯಿರುತ್ತದೆ.

ವಿಶ್ವಾಸ—ಅವರಿಗೂ ಮಕ್ಕಳು ಬೇಡವೆಂದು ಯಾರು ಹೇಳುವರು? ಆದರೆ ನಿಮ್ಮಂಥ ದುರ್ಬಲರಿಂದ ಹುಟ್ಟುವ ಸಂತತಿಗಿಂತಲೂ ತಮ್ಮ ಐಹಿಕ ಸುಖಕ್ಕೆಲ್ಲ ತಿಲಾಂಜಲಿಯನ್ನು ಕೊಟ್ಟ ಆ ತ್ಯಾಗವೀರರಿಂದ ಹುಟ್ಟುವ ಸಂತತಿಯು ಶತಪಟ್ಟು ಬಲವುಳ್ಳದ್ದಾಗಿರುತ್ತದೆ. 'ತ್ಯಾಗದಲ್ಲಿ ಕರ್ಣ'ನೆಂದು ಒಬ್ಬನೇ ಒಬ್ಬ ವ್ಯಕ್ತಿಯ ಹೆಸರಿನಿಂದ ಗಂಡಸು ಜಾತಿಯೆಲ್ಲ ಮೆರೆಯುತ್ತಿದೆ. ಇದೇ ಒಂದು ಭರತಖಂಡದಲ್ಲಿ ಈಗ ತಮ್ಮ ಐಹಿಕ ಸುಖಸರ್ವಸ್ವವನ್ನೆಲ್ಲ ದಾನಮಾಡಿ ಹೃದಯವನ್ನು ಸುಟ್ಟು ಸುಣ್ಣಮಾಡಿ ಹೊರಗೆ ಚೆಲ್ಲುತ್ತಿರುವ ೧ ಕೋಟಿ ೩೦ ಲಕ್ಷ ಬಾಲವಿಧವಾ ತ್ಯಾಗಿಗಳಿದ್ದ ಮೇಲೆ ಸ್ತ್ರೀಯರೆಷ್ಟು ಅಭಿಮಾನಪಡಬೇಕಾಯಿತು?

ವಿನಾಯಕ—ಅದೆಲ್ಲ ನಿಜ; ಆದರೆ ಶಾಸ್ತ್ರದ ಒಪ್ಪಿಗೆಯಿಲ್ಲದ ಕೆಲಸದಲ್ಲಿ ನಾವೇಕೆ ಕೈಹಾಕೋಣ?

ವಿಶ್ವಾಸ—ರಾಯರೇ, ತನ್ನಂತೆ ಪರರ ಬಗೆಯಬೇಕೆಂಬದೇ ಅರ್ಥಾತ್ ಆತ್ಮವತ್ ಸರ್ವಭೂತಾನಿ ಎಂಬದೇ ಶಾಸ್ತ್ರದ ಸಾರವಲ್ಲವೇ? ಹೀಗಿದ್ದಮೇಲೆ ಅರುವತ್ತು ವರುಷದ ಮುಪ್ಪಿನ ಕಾಲದಲ್ಲಿ ವಿಕಾರಕ್ಕೊಳಗಾಗಿ ತರುಣಿಯರನ್ನು ಬಯಸುವ ನೀವು, ನಿಮ್ಮಂತೆಯೆ ಅಥವಾ ಅದಕ್ಕಿಂತ ಹೆಚ್ಚಾಗಿ ಆ ವಿಧವೆಯರಾದ ತರುಣಿಯರ ಸ್ಥಿತಿಯಿರುವದೆಂದು ಕಲ್ಪಿಸಿ ಕುದುವೆಗೆ ಅವಕಾಶವನ್ನೇಕೆ ಮಾಡಿಕೊಡಬಾರದು? ಅಲ್ಲದೆ ಇಷ್ಟು ಜನ ಬಾಲವಿಧವೆಯರಾಗಲಿಕ್ಕೆ ಬಾಲವಿವಾಹವನ್ನು ಮಾಡುವದಕ್ಕೆ ಯಾವ ಶಾಸ್ತ್ರಸಮ್ಮತಿಯು ಸಿಕ್ಕಿತು? ಪುರುಷರನ್ನು ಕೇಳುವವರು ಯಾರೂ ಇಲ್ಲವೆಂದು ಮನಬಂದಂತೆ ನಡೆಯಹೋಗುವದು ಸರಿಯಲ್ಲ. ಕಾಲಕ್ಕೆ ತಕ್ಕಂತೆ ಶಾಸ್ತ್ರಗಳನ್ನು ಸಹ ಬದಲಿಸಬೇಕಾಗುವದು. ಈಗಿನ ವ್ಯಭಿಚಾರ, ಶಿಶುಹತ್ಯೆ, ಖೂನು, ಗರ್ಭಪಾತಗಳಿಗೆ ಕಾರಣರ್ಯಾರು? ವಿಧವೆಯ

ರಲ್ಲ, ಸಮಾಜ ಮುಂದಾಳುಗಳಿನ್ನಿಸಿಕೊಳ್ಳುವ ಗಂಡಸರು.

ವಿನಾಯಕ:—ವಿಶ್ವಾಸರಾವ, ಇಲ್ಲದ ಪದ್ಧತಿಯನ್ನು ಸಮಾಜದಲ್ಲಿ ತರುವದರಿಂದ ಹಾನಿಯೇ ಹೊರತು ಲಾಭವಿಲ್ಲ. ವಿಧವೆಯರು ದೈವದ ಮೇಲೆ ಹೊರೆಯನ್ನು ಹಾಕಿ ವಿಷಯಸುಖಲಾಲಸೆಯನ್ನು ಹಿಡಿತದಲ್ಲಿಡಲಿಕ್ಕೆ ಕಲಿಯಲಿಕ್ಕೆ ಬೇಕು. ಮನಸ್ಸನ್ನು ವಜ್ರಕ್ಕಿಂತ ಕಠಿಣವಾಗಿ ಮಾಡಿ ಸುಖೋಪಭೋಗದ ಇಚ್ಛೆಯನ್ನು ಬಿಟ್ಟು, ಮನೋನಿಗ್ರಹವನ್ನು ಮಾಡಬೇಕು. ಇದ್ದ ಸ್ಥಿತಿಯಲ್ಲಿಯೇ ಸಮಾಧಾನಪಡುತ್ತ ಪರಮಾತ್ಮನ ಧ್ಯಾನದಲ್ಲಿದ್ದು, ಒಂದಿಲ್ಲೊಂದು ದಿವಸ ಈ ಲೋಕವನ್ನು ಬಿಟ್ಟು ಹೋಗಬೇಕು.

ವಿಶ್ವಾಸರಾವ—ರಾಯರೇ, ಈಶ್ವರನು ಸುಖಾಪೇಕ್ಷೆಯನ್ನು ಸರ್ವರಿಗೂ ಕೊಟ್ಟಿದ್ದಾನೆ. ನಾವೆಲ್ಲರೂ ಒಬ್ಬರೊಬ್ಬರ ಬಂಧುಗಳಾಗಿರುವದರಿಂದ ಪರರ ದುಃಖವನ್ನು ನಿವಾರಣ ಮಾಡುವದು ನಮ್ಮ ಆದ್ಯ ಕರ್ತವ್ಯವಾಗಿದೆ. ಬಾಲ್ಯದಲ್ಲಿಯೇ ವಿಧವೆಯರಾಗಿ ಯೌವನದಲ್ಲಿ ಇಂದ್ರಿಯ ವಿಕಾರವನ್ನು ತಡೆಯಲಾರದೆ ಸಮಾಜದಲ್ಲಿ ದುರಾಚಾರವನ್ನು ಹಬ್ಬಿಸುವದಕ್ಕಿಂತ ಪುನರ್ವಿವಾಹ ಮಾಡಿಕೊಂಡು ನಾಲ್ಕು ಜನರಂತೆ ಸಂಸಾರ ಸಾಗಿಸಿ ಕೀರ್ತಿಯಿಂದ ಸಾಯುವದು ಹಿತಕರವಲ್ಲವೇ? ನೀವು ಶಾಸ್ತ್ರ ಮರ್ಯಾದೆಯನ್ನು ಮೀರಿ ಬಾಲ್ಯದಲ್ಲಿ ವಿವಾಹಮಾಡಿದ ತಪ್ಪಿಗಾಗಿ ಆ ಬಾಲಿಕೆಯು ವೈಧವ್ಯಶಿಕ್ಷೆಯನ್ನು ಅನುಭೋಗಿಸಬೇಕೆಂಬುವದು ಎಲ್ಲಿಯ ಮಾತು? ವಿಧವಾ ವಿವಾಹಕ್ಕೆ ಸಮ್ಮತಿ ಕೊಡದಿರುವದೆಂದರೆ ವ್ಯಭಿಚಾರ ಬಾಲಹತ್ಯಾದಿ ದೋಷಗಳಿಗೆ ಉತ್ತೇಜನ ಕೊಟ್ಟಂತೆಯೇ ಸರಿ. ಬಡತನದಲ್ಲಿಯ ಬಾಲವಿಧವೆಯರು ತಮ್ಮ ಹೊಟ್ಟೆಗಾಗಿ ಕೂಲಿ-ಕುಂಬಳಿ ಮಾಡಲಿಕ್ಕೆ ಗಿರಣಿ ಮೊದಲಾದವುಗಳಿಗೆ ಹೋದಾಗ ಅಲ್ಲಿಯ ನರಾಧಮರು ಅವರ ಮೇಲೆ ಮಾಡುವ ಮಂಗಚೇಷ್ಟೆ ಬಲಾತ್ಕಾರಗಳನ್ನು ನೀವು ಕಣ್ಣಿದ್ದೂ ನೋಡಿಲ್ಲವೇ? ಒಂದು ಕಡೆಗೆ ಬಡತನ; ಮತ್ತೊಂದು ಕಡೆಗೆ ಈ ದುಷ್ಟ ನರಪಶುಗಳ ಪೀಡೆ. ಇವುಗಳನ್ನು ಸಹಿಸಿ ದುಃಖದಲ್ಲಿ ಬಳಲುವದಕ್ಕಿಂತ ಪುನರ್ವಿವಾಹದ ಸಂಸಾರವು ಎಷ್ಟು ಸುಖಕರವಾದದ್ದು! ಸತ್ಕರ್ಮದಿಂದ ಜೀವಿಸುವದು ಕಠಿಣವೆಂದು ತಿಳಿದು ಎಷ್ಟು ಜನ ವಿಧವೆಯರು ಕೆಟ್ಟ ಹಾದಿಯನ್ನು ಹಿಡಿದಿಲ್ಲ? ಸತಿಹೋಗುವದು ಈಗ ಮುಳುಗಿಹೋಗಿದೆ. ಆ ಸುಶೀಲ ಬಾಲವಿಧವೆಯರನ್ನು ತಮ್ಮ ಜಾಲದಲ್ಲಿ ಎಳಕೊಳ್ಳುವದಕ್ಕಾಗಿಯೇ ಎಷ್ಟೋ ನರಾಧಮರು ಪುನರ್ವಿವಾಹಕ್ಕೆ ಸಮ್ಮತಿಯನ್ನು ಕೊಡುವದಿಲ್ಲ.

ವಿನಾಯಕ—ಹಾಗಲ್ಲ ವಕೀಲರೇ, ನಮ್ಮ ದೇಶದಲ್ಲಿಲ್ಲದ ಪದ್ಧತಿಯನ್ನು ನಾವೆಲ್ಲಿಂದ ತರೋಣ?

ವಿಶ್ವಾಸ—ಹೌದು ಹೌದು! ಹಾಗಾದರೆ ನಿಮ್ಮ ಮೈಮೇಲಿನ ಕೋಟು, ಹ್ಯಾಟು, ಬೂಟು, ಪ್ಯಾಂಟಿನ ಪದ್ಧತಿಯು ಕೇವಲ ನಮ್ಮ ಭರತಖಂಡದ್ದೇ ಅಲ್ಲವೇ? ತಲೆಯ ಮೇಲೆ ಕ್ರಾಪು ಬಿಡುವ ಪದ್ಧತಿಯೆಲ್ಲಿಯದು? ಸುಶಿಕ್ಷಿತತನಕ್ಕೂ ಧರ್ಮಕ್ಕೂ ಅರದಾಳಹಚ್ಚಿ ಬ್ರಾಂಡಿ ಕುಡಿಯುವದೆಲ್ಲಿಯ ಪದ್ಧತಿಯು? ಗಂಡಸರನ್ನು ಯಾರೂ ಕೇಳುವವರೇ ಇಲ್ಲವೆಂದು ತೋರುತ್ತದೆ. ನಮ್ಮ ದೇಶವು ಹಿಂದುಳಿಯುವದಕ್ಕೆ ಪುನರ್ವಿವಾಹಕ್ಕೆ ಸಮ್ಮತಿಯಿಲ್ಲದಿರುವದೇ ಕಾರಣವಾಗಿದೆ. ಅದೇ ಸುಧಾರಿಸಿದ ಇಂಗ್ಲಂಡ ಅಮೇರಿಕಾ ಜರ್ಮನ್ ರಾಷ್ಟ್ರಗಳನ್ನು ನೋಡಿರಿ. ಅಲ್ಲಿಯ ವಿಧವೆಯರು ಪುನರ್ವಿವಾಹ ಮಾಡಿಕೊಂಡು ಎಷ್ಟು ಸುಖದಿಂದಿರುವರು? ಸುಖ ಸೌಭಾಗ್ಯಗಳಿಂದ ಮೆರೆಯುತ್ತಿರುವ ಆ ಪಾಶ್ಚಾತ್ಯ ಸ್ತ್ರೀಯರ ಮುಖವನ್ನೂ, ಧರ್ಮದ ಬಲಿಗೆ ಬಿದ್ದು ತಲೆಯನ್ನುಬೋಳಿಸಿಕೊಂಡು ಅಮಂಗಲ ಸೂಚಕ ಕೆಂಪು ಬಟ್ಟೆಯನ್ನುಟ್ಟು ತರುಣ ಸಂನ್ಯಾಸಿಯಂತೆ ತೋರುವ ನಮ್ಮ ಬಾಲ ವಿಧವೆಯರನ್ನೂ ನೋಡಿದರೆ ನಿಮ್ಮ ಮನಸ್ಸು ಏನು ಹೇಳುವದು? ಇನ್ನಾದರೂ ಕಣ್ಣು ತೆರೆಯಿರಿ. ನಿಮ್ಮಂಥ ಶ್ರೀಮಂತರು ವಿಧವಾ ವಿವಾಹ ಫಂಡಿಗೆ ಸಹಾಯ ಮಾಡಿದರೆ ನಿಮ್ಮ ಮಕ್ಕಳ ಪಾತಿವ್ರತ್ಯವನ್ನು ಕಾಯ್ದಂತಾಗುವದು. ಈಗ ನೀವು ಮದುವೆ ಮಾಡಿಕೊಳ್ಳುವ ಹವ್ಯಾಸವನ್ನು ಬಿಟ್ಟು, ಅದೇ ಹಣವನ್ನೇ ಇಂಥ ಫಂಡುಗಳಿಗೆ ಕೊಟ್ಟರೆ ದೇಶಕ್ಕೆ ಎಷ್ಟು ಹಿತವಾಗುವದು?

ವಿನಾಯಕ:—ಅಂತೂ ನೀವು ನನಗೆ ಒಳ್ಳೇ ಶನಿ ಸ್ಥಾನದಲ್ಲಿ ಬಂದಿರುವಿರಿ. ನಾನೇಕೆ ಲಗ್ನಮಾಡಿಕೊಳ್ಳಬಾರದು?

ವಿಶ್ವಾಸ:—ರಾಯರೇ, ನಿಮ್ಮ ಪೂರ್ವ ಕರ್ಮಕ್ಕನುಸರಿಸಿ ಪರಮಾತ್ಮನು ನಿಮ್ಮ ಮೂವರು ಪತ್ನಿಯರನ್ನು ಪಾರು ಮಾಡಿದನು. ಮಕ್ಕಳೂ ಉಳಿಯಲಿಲ್ಲ. ಇನ್ನೂ ಲಗ್ನದ ಅಭಿಲಾಷೆಯನ್ನು ಹಿಡಿಯುವದೆಂದರೇನು? ಬಾಲವಿಧವೆಯರಿಗೆ ಮನೋನಿಗ್ರಹವನ್ನು ಕಲಿಸುವ ನೀವೇಕೆ ಮನೋನಿಗ್ರಹ ಮಾಡಬಾರದು? ರಾವಬಹಾದ್ದೂರ, ಸಂಸಾರವನ್ನು ಸಾಗಿಸುವ ಇಚ್ಛೆಯಿದ್ದರೇ ಮದುವೆಯಾಗಬೇಕು. ಸುಮ್ಮನೆ ಕೊರಳಲ್ಲಿ ತಾಯಿತವನ್ನು ಕಟ್ಟಿಕೊಂಡಂತೆ ಆ ಹುಡುಗಿಯನ್ನು ಕಟ್ಟಿಕೊಂಡೇನು ಮಾಡುವಿರಿ? ಸರ್ವ ರೀತಿಯಿಂದಲೂ ಪತ್ನಿಯನ್ನು

ರಕ್ಷಿಸಲಿಕ್ಕೆ ಶಕ್ತಿಯಿದ್ದವನೇ ಪತಿಯಾಗಬೇಕು. ದುಡ್ಡಿನ ಮದದಿಂದ ಪತ್ನಿಯನ್ನು ಬಯಸಿದರೆ ಶ್ರೀಮಂತಿಕೆಯ ಗರ್ವದಿಂದ ಅಯೋಗ್ಯನು ಅಧಿಕಾರಿಯಾಗಿ ಮೂಗು ಕೊಯಿದುಕೊಂಡು ಕನ್ನಡಿಯನ್ನು ಹಿಡಕೊಂಡಂತಾಗುತ್ತದೆ. ಜೀವನ ಕಲಹದ ಕಾಲದಲ್ಲಿ ಪುನಃ ಮೊದಲಿನ ಮುಸಲ್ಮಾನರ ಹಾವಳಿಯಂತೆ ಎಷ್ಟೋ ದಂಗೆಗಳು ನಡೆಯಬಹುದು. ಅಂಥ ವೇಳೆಯಲ್ಲಿ ನೀವು ನಿಮ್ಮ ಪತ್ನಿಯನ್ನು ರಕ್ಷಿಸಲಿಕ್ಕೆ ಶಕ್ತಿಯೆಲ್ಲಿರುವದು? ಆ ಮೇಲೆ ಜೀವವಿರುವಾಗಲೇ ಮರಣಯಾತನೆಯನ್ನು ಅನುಭವಿಸುವದಕ್ಕಿಂತ ಈಗಲೇ ಆ ಹವ್ಯಾಸವನ್ನು ಬಿಟ್ಟುಬಿಡಿರಿ. ನಿಮ್ಮ ಕಾಲು ಬೀಳುತ್ತೇನೆ.

ವಿನಾಯಕ—ನನ್ನ ಹೆಂಡತಿಯನ್ನು ರಕ್ಷಿಸಲಿಕ್ಕೆ ಆಳುಗಳನ್ನಿಡುತ್ತೇನೆ.

ವಿಶ್ವಾಸ—ಶ್ರೀಮಂತರ ಮನೆಯಲ್ಲಿ ಅವರ ಘಾತ ಮಾಡುವವರೇ ಆಳುಗಳು.

ವಿನಾಯಕ (ಸ್ವಗತಂ)—ಈ ಬಿಳೀ ಟೊಪ್ಪಿಗಿ ಜನರು ಬರೇ ಇಂಥ ಉಪದ್ವ್ಯಾಪದಲ್ಲಿಯೇ ಇರುವರು. ನಮ್ಮಂಥ ಶ್ರೀಮಂತರ ಗಂಟನ್ನಂತೂ ಯಾವಾಗ ಹರಣಮಾಡೇವೆಂದು ಹದ್ದಿನಂತೆ ಹೊಂಚು ಹಾಕುತ್ತಿರುವರು. ನಾವು ಮದುವೆ ಮಾಡಿಕೊಂಡರೆ ಇವನಪ್ಪನದೇನು ಗಂಟು ಹೋಗುತ್ತದೆಯೋ ಏನೋ?

ವಿಶ್ವಾಸ—ಆಃ! ಮರೆತಿದ್ದೆ; ರಾಯರೇ ದಯಮಾಡಿ ಸ್ವರಾಜ್ಯಫಂಡು ಕೊಡಿರಿ. (ಡಬ್ಬಿ ಹಾರಿಸುವರು.)

ವಿನಾಯಕ—ನಮ್ಮ ಹಿತ್ತಲದಲ್ಲಿ ರೂಪಾಯಿ ಗಿಡವನ್ನು ನೆಟ್ಟಿಲ್ಲ. ಮೊನ್ನೆ ಮೊನ್ನೆ ವಾರಲೋನಿಗೆ ೧೦ ಸಾವಿರ ರೂಪಾಯಿ ಕೊಟ್ಟಿದ್ದೇನೆ. ಈಗೆಲ್ಲಿಂದ ಹಣವನ್ನು ತರಲಿ?

ವಿಶ್ವಾಸ:—ಅದಕ್ಕೆ ಬದಲಾಗಿ ನಿಮಗೆ ರಾವಬಹಾದ್ದೂರ ಪದವಿಯು ಬಂತಲ್ಲವೇ? ದೇಶದ ಉದ್ಧಾರಕ್ಕೆ ಹಣವನ್ನು ಹೇಗೆ ಕೊಟ್ಟೀರಿ. ಅಕ್ಕಸಾಲಿಗರೇ ಮುರವನ್ನು ಚುಚ್ಚಿದರೆ ನೆಟ್ಟಗೆ.

ವಿನಾಯಕ:—ಇರಲಿ. ಸಂಜೆಯ ಕಡೆಗೆ ಮನೆಗೆ ಬರ್ರಿ. ಏನೋ ಕೊಟ್ಟೇನಂತೆ.

ವಿಶ್ವಾಸ:—ದಯಮಾಡಿರಿ ರಾಮ ರಾಮ! ತಮ್ಮದೇನೂ ಬೇಕಾಗಿಲ್ಲ. (ರಾವಬಹಾದ್ದೂರ ಹೋಗುತ್ತಾನೆ.) ಈಗ ಯಾವ ವರ್ತಮಾನಪತ್ರಗಳನ್ನು ನೋಡಿರಿ, ವಜ್ರಾಂಗಬಿಂದು, ವಜ್ರಾಂಗಸುಂದರಪಾಕ, ನಪುಂಸಕತ್ವಾರಿತೈಲ

ವಿನಾಯಕ—ಹಾಗಲ್ಲ ವಕೀಲರೇ, ನಮ್ಮ ದೇಶದಲ್ಲಿಲ್ಲದ ಪದ್ಧತಿಯನ್ನು ನಾವೆಲ್ಲಿಂದ ತರೋಣ?

ವಿಶ್ವಾಸ—ಹೌದು ಹೌದು! ಹಾಗಾದರೆ ನಿಮ್ಮ ಮೈಮೇಲಿನ ಕೋಟು, ಹ್ಯಾಟು, ಬೂಟು, ಪ್ಯಾಂಟಿನ ಪದ್ಧತಿಯು ಕೇವಲ ನಮ್ಮ ಭರತಖಂಡದ್ದೇ ಅಲ್ಲವೇ? ತಲೆಯ ಮೇಲೆ ಕ್ರಾಪು ಬಿಡುವ ಪದ್ಧತಿಯೆಲ್ಲಿಯದು? ಸುಶಿಕ್ಷಿತತನಕ್ಕೂ ಧರ್ಮಕ್ಕೂ ಅರದಾಳಹಚ್ಚಿ ಬ್ರಾಂಡಿ ಕುಡಿಯುವದೆಲ್ಲಿಯ ಪದ್ಧತಿಯು? ಗಂಡಸರನ್ನು ಯಾರೂ ಕೇಳುವವರೇ ಇಲ್ಲವೆಂದು ತೋರುತ್ತದೆ. ನಮ್ಮ ದೇಶವು ಹಿಂದುಳಿಯುವದಕ್ಕೆ ಪುನರ್ವಿವಾಹಕ್ಕೆ ಸಮ್ಮತಿಯಿಲ್ಲದಿರುವದೇ ಕಾರಣವಾಗಿದೆ. ಅದೇ ಸುಧಾರಿಸಿದ ಇಂಗ್ಲಂಡ ಅಮೇರಿಕಾ ಜರ್ಮನ್ ರಾಷ್ಟ್ರಗಳನ್ನು ನೋಡಿರಿ. ಅಲ್ಲಿಯ ವಿಧವೆಯರು ಪುನರ್ವಿವಾಹ ಮಾಡಿಕೊಂಡು ಎಷ್ಟು ಸುಖದಿಂದಿರುವರು? ಸುಖ ಸೌಭಾಗ್ಯಗಳಿಂದ ಮೆರೆಯುತ್ತಿರುವ ಆ ಪಾಶ್ಚಾತ್ಯ ಸ್ತ್ರೀಯರ ಮುಖವನ್ನೂ, ಧರ್ಮದ ಬಲೆಗೆ ಬಿದ್ದು ತಲೆಯನ್ನು ಬೋಳಿಸಿಕೊಂಡು ಅಮಂಗಲ ಸೂಚಕ ಕೆಂಪು ಬಟ್ಟೆಯನ್ನುಟ್ಟು ತರುಣ ಸಂನ್ಯಾಸಿಯಂತೆ ತೋರುವ ನಮ್ಮ ಬಾಲ ವಿಧವೆಯರನ್ನೂ ನೋಡಿದರೆ ನಿಮ್ಮ ಮನಸ್ಸು ಏನು ಹೇಳುವದು? ಇನ್ನಾದರೂ ಕಣ್ಣು ತೆರೆಯಿರಿ. ನಿಮ್ಮಂಥ ಶ್ರೀಮಂತರು ವಿಧವಾ ವಿವಾಹ ಫಂಡಿಗೆ ಸಹಾಯ ಮಾಡಿದರೆ ನಿಮ್ಮ ಮಕ್ಕಳ ಪಾತಿವ್ರತ್ಯವನ್ನು ಕಾಯ್ದಂತಾಗುವದು. ಈಗ ನೀವು ಮದುವೆ ಮಾಡಿಕೊಳ್ಳುವ ಹವ್ಯಾಸವನ್ನು ಬಿಟ್ಟು, ಅದೇ ಹಣವನ್ನೇ ಇಂಥ ಫಂಡುಗಳಿಗೆ ಕೊಟ್ಟರೆ ದೇಶಕ್ಕೆ ಎಷ್ಟು ಹಿತವಾಗುವದು?

ವಿನಾಯಕ:—ಅಂತೂ ನೀವು ನನಗೆ ಒಳ್ಳೇ ಶನಿ ಸ್ಥಾನದಲ್ಲಿ ಬಂದಿರುವಿರಿ. ನಾನೇಕೆ ಲಗ್ನಮಾಡಿಕೊಳ್ಳಬಾರದು?

ವಿಶ್ವಾಸ:—ರಾಯರೇ, ನಿಮ್ಮ ಪೂರ್ವ ಕರ್ಮಕ್ಕನುಸರಿಸಿ ಪರಮಾತ್ಮನು ನಿಮ್ಮ ಮೂವರು ಪತ್ನಿಯರನ್ನು ಪಾರು ಮಾಡಿದನು. ಮಕ್ಕಳೂ ಉಳಿಯಲಿಲ್ಲ. ಇನ್ನೂ ಲಗ್ನದ ಅಭಿಲಾಷೆಯನ್ನು ಹಿಡಿಯುವದೆಂದರೇನು? ಬಾಲವಿಧವೆಯರಿಗೆ ಮನೋನಿಗ್ರಹವನ್ನು ಕಲಿಸುವ ನೀವೇಕೆ ಮನೋನಿಗ್ರಹ ಮಾಡಬಾರದು? ರಾವಬಹಾದ್ದೂರ, ಸಂಸಾರವನ್ನು ಸಾಗಿಸುವ ಇಚ್ಛೆಯಿದ್ದರೇ ಮದುವೆಯಾಗಬೇಕು. ಸುಮ್ಮನೆ ಕೊರಳಲ್ಲಿ ತಾಯಿತವನ್ನು ಕಟ್ಟಿಕೊಂಡಂತೆ ಆ ಹುಡುಗಿಯನ್ನು ಕಟ್ಟಿಕೊಂಡೇನು ಮಾಡುವಿರಿ? ಸರ್ವ ರೀತಿಯಿಂದಲೂ ಪತ್ನಿಯನ್ನು

ರಕ್ಷಿಸಲಿಕ್ಕೆ ಶಕ್ತಿಯಿದ್ದವನೇ ಪತಿಯಾಗಬೇಕು. ದುಡ್ಡಿನ ಮದದಿಂದ ಪತ್ನಿಯನ್ನು ಬಯಸಿದರೆ ಶ್ರೀಮಂತಿಕೆಯ ಗರ್ವದಿಂದ ಅಯೋಗ್ಯನು ಅಧಿಕಾರಿಯಾಗಿ ಮೂಗು ಕೊಯಿದುಕೊಂಡು ಕನ್ನಡಿಯನ್ನು ಹಿಡಕೊಂಡಂತಾಗುತ್ತದೆ. ಜೀವನ ಕಲಹದ ಕಾಲದಲ್ಲಿ ಪುನಃ ಮೊದಲಿನ ಮುಸಲ್ಮಾನರ ಹಾವಳಿಯಂತೆ ಎಷ್ಟೋ ದಂಗೆಗಳು ನಡೆಯಬಹುದು. ಅಂಥ ವೇಳೆಯಲ್ಲಿ ನೀವು ನಿಮ್ಮ ಪತ್ನಿಯನ್ನು ರಕ್ಷಿಸಲಿಕ್ಕೆ ಶಕ್ತಿಯೆಲ್ಲಿರುವದು? ಆ ಮೇಲೆ ಜೀವವಿರುವಾಗಲೇ ಮರಣಯಾತನೆಯನ್ನು ಅನುಭವಿಸುವದಕ್ಕಿಂತ ಈಗಲೇ ಆ ಹವ್ಯಾಸವನ್ನು ಬಿಟ್ಟುಬಿಡಿರಿ. ನಿಮ್ಮ ಕಾಲು ಬೀಳುತ್ತೇನೆ.

ವಿನಾಯಕ—ನನ್ನ ಹೆಂಡತಿಯನ್ನು ರಕ್ಷಿಸಲಿಕ್ಕೆ ಆಳುಗಳನ್ನಿಡುತ್ತೇನೆ.

ವಿಶ್ವಾಸ—ಶ್ರೀಮಂತರ ಮನೆಯಲ್ಲಿ ಅವರ ಘಾತ ಮಾಡುವವರೇ ಆಳುಗಳು.

ವಿನಾಯಕ (ಸ್ವಗತಂ)—ಈ ಬಿಳೇ ಟೊಪ್ಪಿಗಿ ಜನರು ಬರೇ ಇಂಥ ಉಪದ್ವ್ಯಾಪದಲ್ಲಿಯೇ ಇರುವರು. ನಮ್ಮಂಥ ಶ್ರೀಮಂತರ ಗಂಟನ್ನಂತೂ ಯಾವಾಗ ಹರಣಮಾಡೇವೆಂದು ಹದ್ದಿನಂತೆ ಹೊಂಚು ಹಾಕುತ್ತಿರುವರು. ನಾವು ಮದುವೆ ಮಾಡಿಕೊಂಡರೆ ಇವನಪ್ಪನದೇನು ಗಂಟು ಹೋಗುತ್ತದೆಯೋ ಏನೋ?

ವಿಶ್ವಾಸ—ಆಃ! ಮರೆತಿದ್ದೆ; ರಾಯರೇ ದಯಮಾಡಿ ಸ್ವರಾಜ್ಯಫಂಡು ಕೊಡಿರಿ. (ಡಬ್ಬಿ ಹಾರಿಸುವರು.)

ವಿನಾಯಕ—ನಮ್ಮ ಹಿತ್ತಲದಲ್ಲಿ ರೂಪಾಯಿ ಗಿಡವನ್ನು ನೆಟ್ಟಿಲ್ಲ. ಮೊನ್ನೆ ಮೊನ್ನೆ ವಾರಲೋನಿಗೆ ೧೦ ಸಾವಿರ ರೂಪಾಯಿ ಕೊಟ್ಟಿದ್ದೇನೆ. ಈಗೆಲ್ಲಿಂದ ಹಣವನ್ನು ತರಲಿ?

ವಿಶ್ವಾಸ:—ಅದಕ್ಕೆ ಬದಲಾಗಿ ನಿಮಗೆ ರಾವಬಹಾದ್ದೂರ ಪದವಿಯು ಬಂತಲ್ಲವೇ? ದೇಶದ ಉದ್ಧಾರಕ್ಕೆ ಹಣವನ್ನು ಹೇಗೆ ಕೊಟ್ಟೀರಿ. ಅಕ್ಕಸಾಲಿಗರೇ ಮುರವನ್ನು ಚುಚ್ಚಿದರೆ ನೆಟ್ಟಗೆ.

ವಿನಾಯಕ:—ಇರಲಿ. ಸಂಜೆಯ ಕಡೆಗೆ ಮನೆಗೆ ಬರ್ರಿ. ಏನೋ ಕೊಟ್ಟೇನಂತೆ.

ವಿಶ್ವಾಸ:—ದಯಮಾಡಿರಿ ರಾಮ ರಾಮ! ತಮ್ಮದೇನೂ ಬೇಕಾಗಿಲ್ಲ. (ರಾವಬಹಾದ್ದೂರ ಹೋಗುತ್ತಾನೆ.) ಈಗ ಯಾವ ವರ್ತಮಾನಪತ್ರಗಳನ್ನು ನೋಡಿರಿ, ವಜ್ರಾಂಗಬಿಂದು, ವಜ್ರಾಂಗಸುಂದರಪಾಕ, ನಪುಂಸಕತ್ವಾರಿತೈಲ,

ಸಪ್ತಸ್ತ್ರೀಜಯ ಗುಳಿಗೆಗಳು, ಮದನಮಂಜರೀಗುಳಿಗೆಗಳು, ಧಾತುಸ್ತಂಭಕ ಮಾತ್ರೆಗಳು, ವೀರ್ಯವರ್ಧಕಲೇಹ್ಯ, ಕಾಮೋತ್ತೇಜಕಪೇಯ, ಕೂದಲುಗಳನ್ನು ಕಪ್ಪು ಮಾಡಲಿಕ್ಕೆ ಪಕ್ಕಾ ಕಲಪು. ಒಮ್ಮೆ ಇದನ್ನು ಪಯೋಗಿಸಿದರೆ ೨೫ವರ್ಷದ ತರುಣರಂತೆ ಕಾಣುವಿರಿ; ಇವೇ ತುಂಬಾ ಜಾಹೀರಾತುಗಳು. ಇವುಗಳಿಗೆ ಆರ್ಡರು ಕೊಡುವವರಲ್ಲಿ ೧೦೦ಕ್ಕೆ ೯೦ ರಂತೆ ಇಂಥ ಮುದಿಕಪಿಗಳೇ. ವಾರ್ಧಕ್ಯದಿಂದ ಒಣಗಿ ಹೋದ ಗಂಡಸುತನವನ್ನು ಯಾವ ವೈದ್ಯನು ತಂದು ಕೊಡುವನು. ದುಡ್ಡು ಎಳೆಯಲಿಕ್ಕೆ ಇದೊಂದು ಹೊಸ ಹವಣಿಕೆ. (ಡಾ. ವಸಂತನು ಬರುವನು.) ಏಕೆ ಡಾಕ್ಟರರೇ, ಒಳ್ಳೇ ಅವಸರದಿಂದ ಹೊರಟಿರಿ? ಉತ್ಪನ್ನವುಹೇಗಿದೆ?

ವಸಂತ:—ವಿಶ್ವಾಸರಾವ, ಈಗಿನ ಕಾಲದಲ್ಲಿ ಯಾವ ಉದ್ಯೋಗ ಮಾಡುವದೂ ಕಷ್ಟವೇ? ಜನರಿಗೆ ಕಾರ್ಯಾಕಾರ್ಯವೆಂಬದು ಗೊತ್ತಿಲ್ಲ. ಅದರಲ್ಲಿಯೂ ಈ ಡಾಕ್ಟರ ಕೆಲಸಕ್ಕಂತೂ ಏನೂ ಮರ್ಯಾದೆಯಿಲ್ಲ. ನೋಡಿರಿ. ಹಳ್ಳಿಗಳಲ್ಲಿ ಸಹ ಮೂರು ನಾಲ್ಕು ಜನರು ಡಾಕ್ಟರರಾಗಿ ಉದ್ಯೋಗವನ್ನು ಹಸಗೆಡಿಸಿಬಿಟ್ಟಿರುವದರಿಂದ ; ಈಗ ಕಾಜು ಮತ್ತು ವಜ್ರಗಳ ಬೆಲೆಯು ಒಂದೇ ಆಗಿದೆ. ನಾನು ಗಿರಾಕಿಗಳನ್ನು ಹೆಚ್ಚಿಸುವ ಉದ್ದೇಶದಿಂದ ಅರ್ಧ ಚಾರ್ಜಿನಿಂದ ಔಷಧ ಕೊಡುತ್ತೇನೆಂದು ಜಾಹೀರಾತು ಕೊಟ್ಟಿದ್ದೇನೆ. ಆದರೆ ಅದರ ಲಾಭವನ್ನು ಯಾರೂ ಮಾಡಿಕೊಳ್ಳುವದಿಲ್ಲ. ನನ್ನಲ್ಲಿ ಬಂದು ಅರ್ಧಚಾರ್ಜಿಗೆ ಔಷಧ ತಕ್ಕೊಳ್ಳುವದರಿಂದ, ಅವರಿಗೆ ಅರ್ಧವು ಉಳಿಯುವದು, ಮತ್ತು ಅನ್ನನ್ನವೆಂದು ಕುಳಿತ ನನಗೆ ಧರ್ಮ ಮಾಡಿದಂತಾಗುವದು. ಧರ್ಮಾರ್ಥಗಳೆರಡೂ ಪುರುಷಾರ್ಥಗಳನ್ನು ಸಾಧಿಸುವ ಈ ಕಾರ್ಯಕ್ಕೆ ಯಾರೂ ಲಕ್ಷ ಕೊಡುವದಿಲ್ಲವೆಂದು ಈ ಜನರ ವಿಚಾರಕ್ಕೆ ನಗಬೇಕೋ ಅಳಬೇಕೋ ತಿಳಿಯದು. ಇರಲಿ. ರಾಮ ರಾಮ! ಈ ಹೊತ್ತು ಅನಾಯಾಸವಾಗಿ ಬಂದು ಪೇಶಂಟವ್ಹಿಜಿಟ್ ಮಾಡುವ ಪ್ರಸಂಗ ಬಂದಿದೆ. ಹೋಗುತ್ತೇನೆ.

ವಿಶ್ವಾಸ:—ಡಾಕ್ಟರ, ಈ ಸ್ವರಾಜ್ಯಫಂಡಿಗೆ ಏನಾದರೂ ಕೊಡಿರಿ.

ವಸಂತ:—ನನ್ನಲ್ಲಿ ಈಗ ಒಂದು ಪೈ ಸಹ ಇಲ್ಲ. ಮತ್ತೆ ಯಾವಾಗಾದರೂ ನೋಡೋಣವಂತೆ. (ಹೋಗುತ್ತಾನೆ.)

ವಿಶ್ವಾಸ:—ನೋಡಿದಿರಾ, ಈ ಡಾಕ್ಟರರನ್ನು! ಕೈಯಲ್ಲಿ ಒಂದು ಪೈ ಸಹ ಇಲ್ಲ. ಮೇಲೆ ಬಾಜೀರಾಯನಂತೆ ಐಟು. ಇದೇ ಉಡುಪಿನಲ್ಲಿಯೇ ಉಳಿಸಿದ್ದರೆ ದುಡ್ಡು ಉಳಿಯುತ್ತಿದ್ದಿಲ್ಲವೇ? ಹೆಸರಿಗೆ ಡಾಕ್ಟರರು, ಪ್ರಕೃತಿಯನ್ನು ನೋಡಿ

ವರೆ ಇವರಲ್ಲಿಯೇ ಸರ್ವವ್ಯಸನಗಳೂ ಮನೆಮಾಡಿಕೊಂಡಿರುವಂತೆ ತೋರುತ್ತದೆ. ಸುಶಿಕ್ಷಿತರಿಗೆ ಹತ್ತಿರುವ ಚುಟ್ಟಾ ಚಹಾ ಭೂತಗಳ ಪರಿಣಾಮವೇ ಇದು.

---

## ಪ್ರವೇಶ—೪

ಸ್ಥಳ—ಮಂದಿರ, ರಮಾಬಾಯಿ ಮತ್ತು ಭಾಗೀರಥೀಬಾಯಿಯೂ ಕುಳಿತಿರುವರು.

ರಮಾಬಾಯಿ—ಪದ—

ಮಾಧವಾ ಗೋಪೀವಿಲಾಸ ಗಾನತೋಷ ಹೇರಮೇಶ || ಪಲ್ಲ ||
ಪೀತವಸನ ದೇವಮದನ | ತಾತ ಸಕಲಾಭರಣ ಸದನ || ೧ ||
ಸಿರಿಯುರಮಣ ಪೊರೆಯೊ ಕರುಣಾಕರ ನಿಧಾನ ಗರುಡಗಮನ || ೨ ||

ಇಂದು ವಿನಾಯಕರಾಯರು ಕಮಲೆಯನ್ನು ನೋಡುವದಕ್ಕೆ ಬರುವರು. ಕಮಲೆಯು ಸರಿಯಾಗಿ ಉತ್ತರವನ್ನು ಕೊಟ್ಟರಂತೂ ಸರಿ. ಇಲ್ಲದಿದ್ದರೆ ಕೈಗೆ ಬಂದ ತುತ್ತು ಬಾಯಿಗೆ ಬಾರದೆ ಹೋಗುವದು.

ಭಾಗೀರಥಿ—(ಬಂದು) ಏನು ರಮಾಬಾಯಿ, ಏನು ಮಾಡುತ್ತಿರುವೆ?

ರಮಾ—ಏನೂ ಇಲ್ಲ ಬಾ; ಇದೇ ಈಗ ಆ ಜವಳಿಕಾರನು ಬಂದಿದ್ದನು.

ಭಾಗೀ—ಹು! ಈ ಸೀರೆಯನ್ನು ಹೊಸದಾಗಿ ತಕ್ಕೊಂಡಂತೆ ತೋರುತ್ತದೆ.

ರಮಾ—ಹು! ಏನೋ ಇಲ್ಲದ್ದಕ್ಕೆ ಅಡಚಣಿಯ ಸಲುವಾಗಿ ಖರೀದಿ ಮಾಡಿದೆ. ಈಗ ಮೊದಲಿನಂತೆ ಚಲೋ ಸೀರೆಗಳು ಸಿಗುವದೇ ಇಲ್ಲ. ನಿನ್ನೆ ರಾತ್ರಿ ಸಹಜ ರಾವಬಹಾದ್ದೂರ ವಿನಾಯಕರಾಯರು ನಮ್ಮ ಮನೆಗೆ ಬಂದಿದ್ದರು, ಅವ್ವವ್ವ, ಏಷ್ಟು ದೊಡ್ಡ ಮನಸ್ಸಿನವರೇ ಅವರು! ಅವರೆದುರಿಗೆ ಸುಮ್ಮನೆ ಮೆಲ್ಲಗೆ ಸೀರಿಯ ಮಾತು ತೆಗೆದದ್ದೊಂದೇ; ಬೆಳಗಾಗುತ್ತಲೇ ಇದನ್ನು ಕಳಿಸಿ ಕೊಟ್ಟಿರುವರು. ಎಷ್ಟಾದರೂ ದೊಡ್ಡ ಮನುಷ್ಯರು!

ಭಾಗೀ—ಈ ಪಪ್ಪಳಿ ಸೀರೆಯು ಯಾರ ಸಲುವಾಗಿ?

ರಮಾ—ಯಾರಸಲುವಾಗಿ ಎಂದರೆ? ನನಗಾಗಿ! ಸಣ್ಣ ಹುಡುಗೆಯರಿಗೆ ಇಂಥ ಸೀರೆಗಳು ಚೆಂದಕಾಣುವದಿಲ್ಲ.

ಭಾಗೀ—ಛೇ ನಮ್ಮವ್ವ! ಇಂಥ ಮುಪ್ಪಿನ ವಯಸ್ಸಿನಲ್ಲಿ ನಿಮಗೆ ಇದೆಂದೆಂದೂ ಶೋಭಿಸುವದಿಲ್ಲ. ಸುಮ್ಮನೆ ನಿಮಗೇಕೆ ತಕ್ಕೊಂಡಿರಿ?

ರಮಾ—ಭಾಗೀರಥೀಬಾಯಿ ಹಾಗಲ್ಲ, ಮನುಷ್ಯನಿಗೆ ಆರಂಭದಲ್ಲಿ ವ್ಯಸನವು ಹೆಚ್ಚಾಗಿದ್ದರೆ ಮೋರೆಯಮೇಲೆ ಮುಪ್ಪಿನ ಕಳೆಯು ತೋರುತ್ತದೆ. ನನ್ನ ಪತಿಯು ತೀರಿಹೋದಮೇಲೆ ಈಗ ಹನ್ನೆರಡು ವರ್ಷಗಳಿಂದ ಒಂದು ದಿವಸವೂ ಸುಖದಿಂದ ಹೋಗಿಲ್ಲ. ಸುಮ್ಮನೆ ಹೋಗಿ ಯಾವದೊಂದು ಭಾವಿಯಲ್ಲಿ ಹಾರಿ ಜೀವಬಿಡುವದು ನೆಟ್ಟಗೆ ಕಾಣುತ್ತದೆ. ಆದರೆ ಮಾಡಬೇಕೇನು? ಮಗಳ ಮೋಹವೊಂದು ಬಿಡಲೊಲ್ಲದು. ಬಿಡುವದಾದರೂ ಹೇಗೆ?

ಭಾಗೀ—ಕಮಲಾವತಿಗೆ ಈಗೆಷ್ಟು ವರ್ಷ?

ರಮಾ—ಅದೆಷ್ಟೋ ನನಗೆ ಇತ್ತೀಚೆಗೆ ನೆನಪೇ ಇರುವದಿಲ್ಲ. ನನಗೇನೂ ಅಷ್ಟು ಬಹಳ ವಯಸ್ಸಾಗಿಲ್ಲ; ನನ್ನ ಪ್ರಕೃತಿಯೇ ಇಷ್ಟು ಸೂಕ್ಷ್ಮ (ಅಭಿನಯ)

ಭಾಗೀ—ನಾನು ನಿಮ್ಮ ವಯಸ್ಸು ವರಮಾನ ಕೇಳಲಿಲ್ಲ; ಕಮಲಾವತಿಯ ಬಗ್ಗೆ ವಿಚಾರಿದೆನು. ಈಗ ಇನ್ನೂ ತರುಣ ವಯಸ್ಸಿನಲ್ಲಿಯೇ ಗಲ್ಲಗಳು ಒಳಸೇರಿರುತ್ತವೆ ನರೆಗಂತೂ ಆಚಾರವೇ ಉಳಿದಿಲ್ಲ. ೧೨-೧೩ ವರ್ಷಕ್ಕೇನೇ ತಲೆಯು ಕ್ಷೀರಸಾಗರವಾಗಿ ಹೋಗುತ್ತದೆ.

ರಮಾ—ನಾನು ಹೇಳುವದೂ ಅದೇ! ನನ್ನ ಅಶಕ್ತತೆಯಿಂದಲೇ ತಲೆಯ ಕೂದಲು ಬೆಳ್ಳಗಾಗಿವೆ. ವಯಸ್ಸು ಬಹಳವಾಗಿಲ್ಲ.

ಭಾಗೀ—ಆದರೂ ರಮಾಬಾಯೀ, ನಿಮಗೆ ಈ ವಯಸ್ಸಿನಲ್ಲಿ ಈ ವೇಷವು ಸರಿಯಲ್ಲ.

ರಮಾ—ಭಾಗಿರಥೀಬಾಯಿ, ಹೆಂಗಸರ ಬುದ್ಧಿಯು ಮೊಳಕಾಲು ಕೆಳಗೆ ಎಂದು ಹೇಳುವದು ಇದಕ್ಕೇ ನೋಡಿರಿ, ಮೈತುಂಬ ರೇಶಿಮೆಯ ಪೋಲಕ, ಪಾದಕ್ಕೆ ಬಡಿಯುವ ವರೆಗೆ ಝುಗಝುಗಿಸುವ ಜರತಾರಿ ಸೀರೆ, ಕೈಕೊರಳುಗಳಲ್ಲಿ ಬಂಗಾರ ಮುತ್ತಿನ ಸೂಕ್ಷ್ಮ ಆಭರಣಗಳು, ಸ್ವಲ್ಪ ನೀಟಾದ ಅಂಬಡಾ ತುರುಬು, ಕಾಲುಗಳಲ್ಲಿ ಸ್ಲೀಪರ, ಮುಖವು ಬಾಡಬಾರದೆಂದು ಕೈಯಲ್ಲಿ ಸಣ್ಣ ಛತ್ರಿ ಇಷ್ಟು ಮಾಡಿದರೆ ಸಾಕು, ಜನರು ಏನಾದರೂ ಒಂದು ಹೆಸರಿಟ್ಟರೇ; ಬಾಯಿ, ಬಡವರೇನು ಶ್ರೀಮಂತರೇನು ಎಲ್ಲರ ಜೀವವೂ ಒಂದೇ ಆದರೆ ತರತರಿತ ತರುಣಿಯರನ್ನಾಗಲಿ ನಿಮ್ಮಂಥ ವಯೋವೃದ್ಧರನ್ನಾಗಲಿ ಹೋಗಿ ಒಂದು ಕಲ್ಲು ಬಂಡೆಯ ಮೇಲೆ ಅಪ್ಪಳಿಸಿದರೆ ಏನೂ ಆಗುವದಿಲ್ಲ. ಆದರೆ ನಮ್ಮಂಥ ಸೂಕ್ಷ್ಮ ಪ್ರಕೃತಿಯವರು ಮಾತ್ರ ಬಹಳ ಜಪ್ಪಿಸಿ ನಡೆಯಬೇಕಾಗುತ್ತದೆ. (ಮುರುಕ)

ಭಾ—ಜಪ್ಪಿಸಿ ತಾಸಿಗೊಂದು ಹೆಜ್ಜೆ ಇಡಿರಿ. ನಿಮ್ಮ ಕೈಹಿಡಿಯುವವ

ಇವರಾರು? ಆದರೆ ಕಮಲಾವತಿಯು ಕಾಣುವದಿಲ್ಲ.

ರಮಾ—ಆಕೆಯೇನು ನಿಮ್ಮಂತೆ ಕೆಲಸಗೇಡಿಯಲ್ಲ. ಕಾಲೇಜಿಗೆ ಹೋಗಿದ್ದಾಳೆ.

ಭಾ—ರಮಾಬಾಯೀ, ಕಮಲಾವತಿಯನ್ನು ಕಾಲೇಜಿಗೆ ಕಳಿಸಿ ಮಡಮ್‌ಸಾಹೇಬರನ್ನು ಮಾಡುತ್ತೀಯೇನು? ಇನ್ನು ಆಕೆಯೇನು ಸಣ್ಣ ಹುಡುಗೆಯಲ್ಲ.

ರಮಾ—ಹೌದವ್ವಾ, ಈಗಿನ ಹುಡುಗೆಯರು ಅದೇನು ಇಂಗ್ರೇಜಿಯೋ ಫಿಂಗ್ರೇಜಿಯೋ ಕಲಿತು ಊಟಮಾಡಿದ ಎಲೆಯನ್ನು ಸಹ ತೆಗೆಯದೆ ಹೊರಗೆ ಹೋಗುತ್ತಾರೆ. ಬಿಡಿಸಿಬಿಡಬೇಕೆಂದರೆ ನಮ್ಮ ರಾವಬಹಾದ್ದೂರರಿಗಂತೂ ಕಲಿತ ಮಡಮ್‌ಸಾಹೇಬರೇ ಬೇಕಂತೆ.

ಭಾಗೀ—ಆ ರಾವಬಹಾದ್ದೂರರ ಮತ್ತು ನಿಮ್ಮ ನಡುವೆ ಏನಾದರೂ ಆಪ್ತವ್ಯವಿರುವದೇನು?

ರಮಾ—ಹೌದು. ಆ ವಿನಾಯಕರಾಯರಿಗೆ ನಮ್ಮ ಮನೆಯ ಮೇಲೆ ಪ್ರೀತಿ ಬಹಳ. ಮೊನ್ನೆ ಯಾವದೋ ರಾಜನ ಜನ್ಮದಿವಸವೋ ಏನು ಪುಣ್ಯದಿವಸವೋ, ಆ ರಾವಬಾಹದ್ದೂರರ ಬಂಗಲೆಯಲ್ಲಿ ಮಡಮ್‌ಸಾಹೇಬರ ಒಂದು ಜಂಗಳಿಯೇ ಬಂದಿತ್ತು. ಏ ನಮ್ಮವ್ವಾ, ಅವತ್ತಿನ ಸೊಬಗು ಏನ ಹೇಳಲೇ? ಏನು ಅವರ ಕುಡುತ, ಏನ ಅವರ ಕುಣಿತ, ಏನವರ ಮಣತ; ನಮ್ಮವ್ವ ನೋಡೋದರೊಳಗೆ ಕಣ್ಣು ತಿರುಗಿ ಹೋದವು. ಯಾವನೋ ಒಬ್ಬ ಶ್ರೀಮಂತ ಹಿಂದೂ ಮನುಷ್ಯನು ಆ ಸಾಹೇಬರಲ್ಲಿ ಕೂಡ್ರಲಿಕ್ಕೆ ಹೋದ ಕೂಡಲೆ ಅದು ಸಾಹೇಬರಿಗೆ ಸೇರಲಿಲ್ಲ. ಆ ಕೂಡಲೆ ರಾವಬಹಾದ್ದೂರರು ಅವನ ಚಂಡಿಗೆ ಕೈಹಾಕಿ ಹೊರಗೆ ದೂಡಿಸಿದರು.

ಭಾ:—ನಮ್ಮ ಜನರನ್ನು ಕಂಡರೆ ಸಾಹೇಬರಿಗೆ ಹೀಗೇ ಸರಿ. ಆದರೆ ತಾವು ಯಾರ ಮನೆಗೆ ಬಂದಿದ್ದರೆಂಬದನ್ನು ಮರೆತಂತೆ ಕಾಣುತ್ತದೆ. ಇರಲಿ, ರಮಾಬಾಯಿ ಕಮಲಾವತಿಯ ಲಗ್ನವನ್ನು ಯಾವಾಗ ಮಾಡುವೆ?

ರಮಾ—ಮುಂದಿನ ಮಾರ್ಗಶೀರ್ಷದಲ್ಲಿ ಮಾಡಬೇಕೆಂಬ ಇಚ್ಛೆಯದೆ.

ಭಾಗೀ—ವರನ ಊರು ಯಾವದು? ಯಾವ ಪರೀಕ್ಷೆಯಾಗಿದೆ? ವಯಸ್ಸೆಷ್ಟು? ತಿಂಗಳಿಗೆ ಪಗಾರವೆಷ್ಟು? ಆಸ್ತಿಯೆಷ್ಟು?

ರಮಾ—ನಿಮಗೆ ಗೊತ್ತಿಲ್ಲವೇ? ನದೀಮೂಲ ಋಷೀಕುಲಗಳನ್ನು ಹೇಗೆ

ತಿಳಿಸಬಾರದೋ ಹಾಗೆಯೇ ವರನ ಹೆಸರು ದೆಸೆಗಳೇಕೆ ಒಂದು ಉಗುರು ಕಣ್ಣು ಸಹ ಹುಡುಗೆಗಾಗಲಿ ಬೇರೆಯವರಿಗಾಗಲಿ ತಿಳಿಯ ಕೂಡದು.

ಭಾಗೀ—ಅಂತೂ ನಿಮ್ಮದೆಲ್ಲ ಬಹಳ ಆಶ್ಚರ್ಯಕರವಾಗಿ ಕಾಣುತ್ತದೆ.

ಕಮಲಾವತಿ—(ಬಂದು) ಏನು ಭಾಗೀರಥೀಬಾಯಿ, ಬಹಳ ದಿವಸಕ್ಕೆ ಬಂದಿರಿ?

ಭಾಗೀ—ಕಮಲೇ, ನಿನ್ನ ಶಿಕ್ಷಣವು ಮುಗಿಯುವದಾದರೂ ಎಂದು?

ಕಮಲಾ—ಶಿಕ್ಷಣಕ್ಕೆ ಮುಗಿತವೇ ಇಲ್ಲ. ಸಾಯುವವರೆಗೂ ಕಲಿತರೂ ಜ್ಞಾನವನದಲ್ಲಿ ಒಂದು ಹೂವಿನಷ್ಟು ಸಹ ಪ್ರಾಪ್ತಿಯಾಗುವದಿಲ್ಲ.

ಭಾಗೀ—ಅಂತೂ ಈ ವಯಸ್ಸನ್ನೆಲ್ಲ ಕಳೆದು ಮುಪ್ಪಿನಕಾಲದಲ್ಲಿ ಮದುವೆ ಮಾಡಿಕೊಳ್ಳುವಂತೆ ಕಾಣುತ್ತದೆ.

ಕಮಲಾ—ಅಕ್ಕಾ ಸಂಸಾರವು ಸುಖದಿಂದ ಸಾಗಬೇಕಾದರೆ ಹೆಣ್ಣು ಮಕ್ಕಳಿಗೆ ಶಿಕ್ಷಣವು ಚನ್ನಾಗಿ ಸಿಗಲಿಕ್ಕೆ ಬೇಕು. ಎಳ್ಳಷ್ಟು ಸಹ ಜಗತ್ತಿನ ಅನುಭವವಿಲ್ಲದ ಕೋಮಲ ಬಾಲಿಕೆಯ ಮೇಲೆ ಸಂಸಾರದ ಭಾರವನ್ನು ಹೇರಿದರೆ ಆ ನಿರ್ಜನ ಅರಣ್ಯದಲ್ಲಿ ಆಕೆಯು ಸುಖದಿಂದ ಬಾಳುವದೆಂತು? ಉತ್ತಮ ಚಿತ್ರಕಾರನಾಗಲಿಕ್ಕೆ ಹೇಗೆ ವಿಸ್ತೃತ ಸೃಷ್ಟಿಯ ಅವಲೋಕನ ಮಾಡಬೇಕಾಗುವದೋ ಅದರಂತೆ ಉತ್ತಮ ಗೃಹಿಣಿಯಾಗಬೇಕಾದರೆ ಉತ್ತಮ ಶಿಕ್ಷಣವನ್ನು ಹೊಂದಬೇಕಾಗುವದು. ಶಿಕ್ಷಣದಿಂದ ಹುಡುಗರು ಉಪದ್ವ್ಯಾಪಿ,' ಅಧಿಕಪ್ರಸಂಗಿ, ನಿರ್ಲಜ್ಜ, ನಿರ್ಭಿಡೆಯವರಾಗುತ್ತಾರೆಂಬ ತಿಳುವಳಿಕೆಯು ತಪ್ಪು! ಸಂಸಾರದಲ್ಲಿ ಬರುವ ಸಂಕಟಗಳನ್ನು ನಿವಾರಿಸಲಿಕ್ಕೆ ಶಿಕ್ಷಣದಿಂದಾಗುವಷ್ಟು ಸಹಾಯವು ಸುಮ್ಮನೆ ಸ್ವರ್ಗ-ನರಕಗಳ ಕಲ್ಪನೆಗಳಿಂದಾಗುವದಿಲ್ಲ.

ಭಾಗೀ—ಅವ್ವವ್ವ! ನೀವು ಇಂಗ್ರೇಜಿ ಹೆಬ್ಬೊತ್ತಿಗೆ ಓದಿದ ಮಡಮ್ ಸಾಹೇಬರು, ನಿಮ್ಮೆದುರಿಗೆ ನಾವು ಮಾತಾಡುವದೇನು? ಒಂದು ಶಬ್ದದಮೇಲೆ ದೊಡ್ಡ ಉಪನ್ಯಾಸವನ್ನೇ ಮಾಡಿಬಿಟ್ಟೆ.

ಕಮಲಾ—ನಿಜ. ನಿಮ್ಮ ತಂದೆಯು ಬಾಲಿಶತನದಿಂದ ನಿಮ್ಮ ಶಿಕ್ಷಣವನ್ನು ಹಾಳುಮಾಡಿರುವದರಿಂದ ಹೀಗೆ ಮಾತಾಡುವದರಲ್ಲಿ ನಿಮ್ಮ ದೋಷವಾದರೂ ಏನು?

ರಮಾ—ಇರಲಿ ಕಮಲೇ ಹೋಗು ಚಹಾ ತಯಾರ ಮಾಡು.

(ಕಮಲೆ ಹೋಗುತ್ತಾಳೆ. ಅಷ್ಟರಲ್ಲಿ ವಿನಾಯಕರಾಯರು ಬಳ್ಳೇ ರೀವಿಯಿಂದ

ಬರುವದನ್ನು ನೋಡಿ ಭಾಗೀರಥಿಯು ಹೋಗುತ್ತಾಳೆ. ವಿನಾಯಕರಾಯರು ಬಂದು ಖುರ್ಚಿಯ ಮೇಲೆ ಕೂಡ್ರುತ್ತಾರೆ)

ವಿನಾಯಕ—ಕಮಲೆಯೆಲ್ಲಿರುವಳು?

ರಮಾ—ಈಗ ಸ್ಟೋ ಹೊತ್ತಿಸಲಿಕ್ಕೆ ಹೋಗಿದ್ದಾಳೆ. ಸ್ವಲ್ಪ ಫರಾಳ ತಯಾರಿಸಲೇನು?

ವಿನಾಯ—ಆಗಲಿ ಮೊದಲು ಕಮಲಾವತಿಯನ್ನಿಲ್ಲಿ ಕಳಿಸು.

ರಮಾ—ಆದರೆ ಈ ಸೀರೆಯನ್ನು ನೋಡಿದಿರೇನು?

ವಿನಾಯ—ಹ! ಮೊದಲು ಕಮಲಾವತಿಯನ್ನು ಕಳಿಸು! ಹಿಂದಿನಿಂದ ನೋಡೋಣಂತೆ. ಇಗೋ, ನಾನು ಕರೆದ ಹೊರತು ನೀನು ಒಳಗೆಬರಕೂಡದು.

ರಮಾ—ಈ ಹೊತ್ತು ಅಷ್ಟು ವಿಶೇಷವೇನು?

ವಿನಾಯ—ಹಾ! ಹೋಗು ಮೊದಲು ಕಮಲೆಯನ್ನು ಕಳಿಸು! ಇಲ್ಲದ ಅಧಿಕಪ್ರಸಂಗ ಮಾಡಬೇಡ.

ರಮಾ—ಆ ಬಂಗಾರದ ಪಾಟಲಿ ತಂದಿರೇನು? ಅದರ ಮೇಲೆ ನನ್ನ ಪ್ರೀತಿಬಹಳ!

ವಿನಾಯ—ನಡೆ ಮೊದಲು ಕಮಲಾವತಿಯನ್ನು ಕಳಿಸು. ಈಗಲೇ ನಿನ್ನ ಕಿಟಿಕಿಟಿ ಸಾಕಾಯಿತು. ಮುಂದೆ ಹೇಗೋ ಏನೋ!

ರಮಾ—ಮೊದಲು, ರಾವಬಾಹದ್ದೂರ, ಆ ದಿವಸ ನೋಡಿದ........

ವಿನಾಯ—ಸುಡುಗಾಡು ಸುಂಗಿತು! ಹೋಗು ಮೊದಲು ಕಮಲೆಯನ್ನು ಕಳಿಸು, ನಾನು ಬೇಗನೆ ಗಾರ್ಡನ್‌ಪಾರ್ಟಿಗೆ ಹೋಗಬೇಕಾಗಿದೆ.

ರಮಾ—ಹಾಗಾದರೆ ನನ್ನನ್ನು ಕರಕೊಂಡು ಹೋಗುವಿರೇನು? ಬೇಕಾದರೆ ನನ್ನನ್ನು ನೋಡಿ ಮಡಮ್‌ಸಾಹೇಬರು ಬಟ್ಟುಕಚ್ಚುವಂತೆ ಮಾಡುತ್ತೇನೆ.

ವಿನಾಯ—ಥೂ ಶನಿಯೇ, ಸಾಕಾಯಿತು ಹೋಗು ಮೊದಲು ಕಮಲೆಯನ್ನು ಕಳಿಸು. ಅಗೋ ಮರೆತೆ, ಈ ಹೊತ್ತು ಭಜಿ ನೀವೇ ತಯಾರಮಾಡಿರಿ. ನಿಮ್ಮ ಕೈಹತೋಟಿಯು ಬಹಳ..............

ರಮಾ—ಅದಕ್ಕಾಗಿಯೇ ದಿನಕ್ಕೆ ಮೂರು ಸಾರೆ ಬರುತ್ತೀರೇನೋ? (ಮುರುಕ ಮಾಡುತ್ತ ಹೋಗುತ್ತಾಳೆ) (ಕಮಲೆ ಬರುತ್ತಾಳೆ)

ಕಮಲಾವತಿ—ಗುಡ್‌ಇವ್ಹಿನಿಂಗ ರಾವಬಹದ್ದೂರ.

ವಿನಾಯಕ—ಭಲೇ ಕಮಲಾವತಿ, ಬಾ ಕೂಡ್ರು. ಏನು ಕಾಲೇಜದ

ಅಭ್ಯಾಸವೆಲ್ಲ ಹೇಗೆ ನಡೆದದೆ?

ಕಮಲಾ—ನಡೆಯುವದೇನು? ಮುಂದಿನ ವಾರ ಇಂಟರ ಪರೀಕ್ಷೆಗೆ ಕೂಡುವೆನು.

ವಿನಾಯಕ—ನಿಜ, ನಿಜ. ನಿಮ್ಮ ಶಿಕ್ಷಣವು ಹಾಗೇ ನಡೆಯಲಿ. ನೀವು ಚೆನ್ನಾಗಿ ಕಲಿತು ಪದವೀಧರರಾದ ಹೊರತು ಸಾಹೇಬ ಮಡಮರ ಕೈಹಿಡಿಯುವ ಯೋಗ್ಯತೆ ಬರುವದಿಲ್ಲ. ಕಮಲಾವತಿ ಬೇಕಾದರೆ ವಿಲಾಯತಿಗೆ ಹೋಗುವ ಇಚ್ಛೆಯಿದ್ದರೆ ಹೇಳು. ಸ್ವತಃ ನಾನೇ ಕರಕೊಂಡು ಹೋಗುತ್ತೇನೆ.

ಕಮಲಾ—ಕಬ್ಬು ಸವಿಯಾಗಿದೆಯೆಂದು ಬೇರು ಸಹಿತ ತಿನ್ನಬಾರದು. ಇಷ್ಟು ಖರ್ಚಿನ ಭಾರವನ್ನು ನಿಮ್ಮ ಮೇಲೆ ಹಾಕಿದ್ದೇ ಸಾಕು. ಇದಕ್ಕೂ ಹೆಚ್ಚಿನ ಖರ್ಚಿನ ಒಜ್ಜೆಯು ಬೇಡ, ಇಲ್ಲದಿದ್ದರೆ ನಾವು ಲೋಭಿಗಳೆಂದು ನೀವೇ ತಿರಸ್ಕರಿಸೀರಿ.

ವಿನಾಯಕ—ಕಮಲಾವತೀ, ನೀನೇನು ನನಗೆ ಪರಕೀಯಳಲ್ಲ. ಈ ರಾವಬಹದ್ದೂರನ ಸ್ಥಾವರ-ಜಂಗಮ ಆಸ್ತಿಯೆಲ್ಲ ನಿನ್ನದೇ. ಅಂದಬಳಿಕ ವಿಲಾಯತಿಯೇನು ಅಮೇರಿಕೆಯೇನು? ನನ್ನ ಕಮಲಾವತಿಯು ಅಪ್ಪಣೆ ಮಾಡುವದೊಂದೇ ತಡ, ಆ ಕೂಡಲೆ ಈ ವಿನಾಯಕರಾಯನು ಪೂರಯಿಸಲಿಕ್ಕೆ ಸಿದ್ಧನೇ.

ಕಮಲಾ—ನೀವು ಮಾತಾಡಿದ್ದು ನಿಮಗಾದರೂ ತಿಳಿಯಿತೋ ಇಲ್ಲವೋ ನನಗೆ ಸಂಶಯ ಬರುತ್ತದೆ.

ವಿನಾಯಕ—ಕಮಲಾವತಿ ಇನ್ನು ಕಣ್ಣುಮುಚ್ಚಣಿಕೆಯೇಕೆ? ಇಂದಿಲ್ಲ ನಾಳೆ ತಿಳಿದೇ ತಿಳಿಯುವದು! ಸುಮ್ಮನೆ ನಿನ್ನನ್ನು ವಂಚಿಸುವದರಲ್ಲಿ ಏನೂ ಅರ್ಥವಿಲ್ಲ. ಕಮಲೇ ನಿನ್ನ ಆಯುಷ್ಯದ ಧ್ಯೇಯವಾದ್ದರೂ ಏನು?

ಕಮಲಾ—ಒಂದು ಶಿಕ್ಷಣದ ಹೊರತು ಬೇರೆ ಯಾವದನ್ನೂ ಇನ್ನೂ ನಿಶ್ಚಯ ಮಾಡಿಲ್ಲ.

ವಿನಾಯಕ—ಅದನ್ನು ನಿಶ್ಚಯಿಸಲಿಕ್ಕೆ ನಿನಗೆ ಬರುವಂತೆಯೂ ಇಲ್ಲ. ಯಾಕಂದರೆ ಅದಕ್ಕೆ ನನ್ನಂತೆ ಸುಧಾರಿಸಿದ ಮನುಷ್ಯನ ಜೊತೆಯೇ ಬೇಕು. ಕಮಲಾವತೀ, ನಾನು ಕೇಳಿದ್ದನ್ನೆಲ್ಲ ಸರಿಯಾಗಿ ತಿಳಕೊಂಡು ಉತ್ತರ ಕೊಡು. ಯಾವನಿಗೆ ಇನ್ನೂ ತುಟಿಯ ಮೇಲಿನ ಜೊಲ್ಲು ಆರಿಲ್ಲವೋ, ಯಾವನಿಗೆ ಜಲಕ್ರೀಡೆಯ ಉತ್ಸವವು ತಿಳಿದಿಲ್ಲವೋ, ಯಾವನಿಗೆ ಹುಡುಗತನದ ಆಟನೋಟಗಳ ಪ್ರೀತಿಯು ತೀರಿಲ್ಲವೋ ಅಂಥ ೨೨ ವರ್ಷದ ಕೋಮಲ ಬಾಲಕನಿಗೆ ಲಗ್ನದ ಅರ್ಥ...

ವಾದರೂ ತಿಳಿಯುವದು ಹೇಗೆ?

ಕಮಲಾ—ಅದೇಕೆ? ರಾಜ್ಯದ ಒಡಮೇಲುಮಾಡುವ ಶಕ್ತಿಯುಳ್ಳ ಇಪ್ಪತ್ತೈದುವರ್ಷದ ತರುಣನನ್ನು ನೀವು ಮೊಲೆಕುಡಿಯುವ ಕೂಸೆಂದು ತಿಳಿದಿರೇನು?

ವಿನಾಯಕ—ಎಲ್ಲಿಯ ರಾಜ್ಯದ ಬುಡಮೇಲು? ಅವಿವೇಕತನದಿಂದ ಸ್ವಂತದ ಬುಡಮೇಲುಮಾತ್ರ ಆಗಬಹುದು. ಇಪ್ಪತ್ತೈದು ವರ್ಷದವನಿಗೆ ಜಗತ್ತಿನ ಅನುಭವವಾದರೂ ಎಷ್ಟು, ಮತ್ತು ಅವನಿಗೆ ಹೆಂಡತಿಯ ಅವಶ್ಯಕತೆಯಾದರೂ ಏನು? ಸುಮ್ಮನೆ ಮದುವೆ ಮಾಡಿಕೊಂಡು ಹೆಂಡತಿಯೊಡನೆ ಪೂರ್ವ-ಪಶ್ಚಿಮ ಮಾಡಿಕೊಳ್ಳುವದರಲ್ಲಿ ಸಂಸಾರ ಸುಖವು ಹೇಗೆ ಸಿಗುವದು? ಲಗ್ನದ ರಹಸ್ಯವು ತಿಳಿಯಲಿಕ್ಕೆ, ಪತ್ನಿಗೆ ಸಂತೋಷವನ್ನುಂಟುಮಾಡಲಿಕ್ಕೆ ಪ್ರೇಮಸಾಗರದಲ್ಲಿ ತೇಲಾಡಿಸಲಿಕ್ಕೆ ನನ್ನಂಥವನೇ ತರುಣಿಯ ಕೈ ಹಿಡಿಯಲಿಕ್ಕೆ ಬೇಕು.

ಕಮಲಾ—(ಸ್ವಗತಂ) ಈ ಭಾಷಣದಲ್ಲೇನೋ ಮೋಸವಿದೆ. ಇನ್ನು ಎಚ್ಚರದಿಂದ ಉತ್ತರಕೊಡಬೇಕು. (ಪ್ರಕಾಶಂ) ರಾವಬಹಾದ್ದೂರ ನೀವು ಮಾತಾಡುವದೇ ನನಗೆ ತಿಳಿಯುವದಿಲ್ಲ.

ವಿನಾಯಕ—ಯಾಕೆ? ಅದರಲ್ಲಿ ನಿನಗೆ ಸಂಶಯವೇನು ಬಂದಿತು?

ಕಮಲಾ—ಅರವತ್ತು ವರ್ಷದ ಅಜ್ಜನು ಇಪ್ಪತ್ತು ವರ್ಷದ ನವತರುಣಿ ಯೆದುರಿಗೆ ಇಂಥ ವಿಷಯವನ್ನು ತೆಗೆಯಬೇಕಾದರೆ, ಅವನ ತಲೆಯು ಕೆಟ್ಟಿರಬೇಕು; ಇಲ್ಲವೇ ಮುದಿಹುಚ್ಚು ತಲೆಗೇರಿರಬೇಕು. ಅಂತೂ ಎರಡರಲ್ಲೊಂದು ನಿಶ್ಚಯ.

ವಿನಾಯಕ—ನಿಜ. ಕಮಲಾವತಿ ನನ್ನ ಇಂಗಿತವನ್ನು ಸರಿಯಾಗಿ ತಿಳಿದೆ. ಪತಿಯ ಮನಸ್ಸಿನ ಅಭಿಪ್ರಾಯವನ್ನು ತಿಳಿಯುವವಳೇ ಪತ್ನಿ ಮತ್ತು ಅವರದೇ ಮದುವೆ. ನನ್ನ ಪ್ರಿಯೇ ಕಮಲಾವತೀ, ಬರೇ ನನ್ನ ತಲೆಯೇ ಏಕೆ? ಪ್ರತಿ ರಕ್ತನಳದಲ್ಲಿಯೂ ರಕ್ತವು....

ಕಮಲಾ—ನನ್ನನ್ನು ಮಾಡಿಕೊಳ್ಳಲಿಕ್ಕೆ ಸಿದ್ಧವಾಗಿರುವದಲ್ಲವೇ?

ವಿನಾಯಕ—ಕಮಲಾವತೀ, ಈಗ ಸಮಾಜದಲ್ಲಿ ನನಗೆಷ್ಟು ಮಾನ-ಮರ್ಯಾದೆಯಿದೆಯೆಂಬದು ನಿನಗೆ ತಿಳಿದೇ ಅದೆ. ನಾನು ಶ್ರೀಮಂತ, ಸುಧಾರಕ, ಉತ್ಸಾಹಿ, ರಾವಬಹಾದ್ದೂರ, ಎಮ್, ಎಲ್, ಸಿ, ಮ್ಯುನಸಿಪಲ್ ಪ್ರೆಸಿಡೆಂಟ, ಮತ್ತು ಸುಂದರ ಮತ್ತು ತರು....ಇದ್ದೇನೆ. ನಿನ್ನ ಮೇಲೆ ನನ್ನ ಪ್ರೇಮವಿದೆ. ನಿನ್ನ ಸ್ವರೂಪದ ತೇಜಕ್ಕಾಗಿ ಪತಂಗದಂತೆ ಬಂದೇಸವನೆ

ಹಗಲು ರಾತ್ರಿ ಚಡಪಡಿಸುತ್ತೇನೆ. ಕಮಲೇ ನೀನು ನನ್ನ ಡಿಯರ ಲೇಡಿಯಾದ ಮೇಲೆ ದೊಡ್ಡ ದೊಡ್ಡ ಮಡಮ್‌ಸಾಹೇಬರು ನಿನ್ನ ಶೇಕಹ್ಯಾಂಡ ಮಾಡುವರು; ಸಣ್ಣ ದೊಡ್ಡ ಸಾಹೇಬರು ನಿನ್ನ ಭೆಟ್ಟಿಗೆ ಬರುವರು. ರಾವಬಹಾದ್ದೂರನ ಹೆಂಡತಿಯೆಂದು ಬೇಕಾದವರು ನಿನ್ನೆದುರಿಗೆ ಕೈ ಜೋಡಿಸಿ ಕುಣಿಯುವರು.

ಕಮಲಾ—ಸಾಕು ಬಾಯಿಮುಚ್ಚಿರಿ. ನಿಮ್ಮ ರಾವಬಹಾದ್ದೂರಿಗೆ ನಾನು ಕವಡಿಯ ಕಿಮ್ಮತ್ತನ್ನು ಸಹ ಕೊಡುವದಿಲ್ಲ. ಇದುವರೆಗೆ ಅಜ್ಞನೆಂದು ತಿಳಿದು ಸುಮ್ಮನೆ ಇದ್ದೆನು. ನಿಮ್ಮ ಈ ದುಷ್ಟವಾಸನೆಯು ಮೊದಲೇ ತಿಳಿದಿದ್ದರೆ ನಮ್ಮ ಮನೆಯ ಮೆಟ್ಟಗಟ್ಟಿಯನ್ನು ಸಹ ಹತ್ತುಗೊಡುತ್ತಿದ್ದಿಲ್ಲ.

ವಿನಾಯಕ—ಎಲೇ ನಾನು ರಾವಬಹಾದ್ದೂರನಿದ್ದೇನೆ.

ಕಮಲಾ—ಹೌದು.

ವಿನಾ—ಎಮ್, ಎಲ್, ಸಿ, ಇದ್ದೇನೆ.

ಕಮಲಾ—ಹೌದು.

ವಿನಾ—ಈ ಊರ ಮ್ಯುನಸಿಪಾಲಟಿ ಪ್ರೆಸಿಡೆಂಟನಿದ್ದೇನೆ.

ಕಮಲಾ—ಹೌದು.

ವಿನಾ—ಶ್ರೀಮಂತನಿದ್ದೇನೆ.

ಕಮಲಾ—ಹೌದು.

ವಿನಾ—ಸುಂದರನಿದ್ದೇನೆ.

ಕಮಲಾ—ಹೌದು.

ವಿನಾ—ನಾನು ಎಷ್ಟು ಮಾತಾಡಿದರೂ ಹೌದು ಎಂದು ಒಂದೇ ಉತ್ತರವನ್ನು ಕೊಡುವೆ. ನನ್ನನ್ನೇನು ಕತ್ತೆಯೆಂದು ತಿಳಿದೆಯೇನು?

ಕಮಲಾ—ಹೌದು.

ವಿನಾ—ನಾನು ನಿನ್ನೆದುರಿಗೆ ಹೀಗೆ ಗುಂಡಾಡಿಸಲಿಕ್ಕೆ ನಾಯಿಯೇನು?

ಕಮಲಾ—ಹೌದು.

ವಿನಾಯಕ—ನೀನು ಹೇಳಿದ್ದೆಲ್ಲ ಕೇಳಲಿಕ್ಕೆ ಬಸವಣ್ಣನೆಂದು ತಿಳಿದೆಯೇನು?

ಕಮಲಾವತಿ—ಹೌದು.

ವಿನಾಯಕ—ಹೌದೆಲೆ ಹೆಣ್ಣೇ, ಅಂತೂ ನಿಮಗೆ ಇರಲಿಕ್ಕೆ ನಾನು ಮನೆಯನ್ನು ಕೊಟ್ಟದ್ದೇ ತಪ್ಪು.

ಕಮಲಾ—ಇಂಥ ಅನಾಥ ತಾಯಿ-ಮಕ್ಕಳಿಗೆ ಆಶ್ರಯಕೊಟ್ಟು ತಮ್ಮ

ದುರುದ್ದೇಶವನ್ನು ಸಾಧಿಸಿಕೊಳ್ಳುವ ಎಷ್ಟೋ ನರಾಧಮರನ್ನು ನೋಡಿದ್ದೇನೆ. ಆದರೆ ಈ ಕಮಲಾವತಿಯ ಮುಂದೆ ನಿಮ್ಮ ಆಟವೇನೂ ನಡೆಯಲಾರದು ತಿಳಿಯಿತೇ?

ವಿನಾಯಕ—(ಸ್ವ) ಈಗ ಸಿಟ್ಟಿಗ ಹೋಗಿ ಉಪಾಯವಿಲ್ಲ. (ಪ್ರಕಾಶ) ಕಮಲೇ, ನನ್ನನ್ನು ತಿರಸ್ಕರಿಸುವ ಉದ್ದೇಶವೇನು? ರಾವಬಹದ್ದೂರ, ಶ್ರೀಮಂತ, ಸುಂದರ, ಸದ್ಗೃಹಸ್ಥ ಇಷ್ಟೆಲ್ಲ ಇದ್ದಮೇಲೆ ನಿನಗೇನುಬೇಕು? ತಿರುಗಿ ಮುರುಗಿ ವಯಸ್ಸಿನ ಪ್ರಶ್ನೆಯೊಂದು. ಅದಾದರೂ ಬಹಳವಿಲ್ಲ ೧೦ ಹೆಚ್ಚು ಹೆತ್ತು ಕಡಿಮೆ ೫೦ ವರ್ಷವಿರಬಹುದು. ನನ್ನ ಈ ಮುಖದ ತೇಜಸ್ಸಿನ ಮೇಲೆಯೇ ನಿನಗೆ ತಿಳಿಯುವದಿಲ್ಲವೇ?

ಕಮಲಾ—ಚೆನ್ನಾಗಿ ತಿಳಿಯುತ್ತದೆಂದೇ ಹೇಳುತ್ತೇನೆ. ನಿಮ್ಮಂಥ ಮುದಿಹುಡುಗರು ಎಷ್ಟು ಕ್ಷೌರಮಾಡಿಸಿದರೇನು? ಎಷ್ಟು ಕಲಪು ಹಚ್ಚಿದರೇನು? ಮೋರೆಯ ಮೇಲಿನ ಸುಕ್ಕು ಹೇಗೆ ಅಡಗುವವು? ಇಂಥವರಿಗೆ ಹೆಂಡತಿಯೇಕೆ?

ವಿನಾಯಕ—ಒಂದುವೇಳೆ ನಿನ್ನ ಮಾತಿಗೇ ಒಪ್ಪೋಣ. ಆದರೆ ಮುದುಕನು ಹೆಂಡತಿಯರ ಅಧೀನರಾಗಿ ಹೇಗೆ ಅವರನ್ನು ಜೋಪಾನ ಮಾಡುತ್ತಾನೋ ಹಾಗೆ ತರುಣನೆಂದಿಗೂ ಮಾಡಲಿಕ್ಕಿಲ್ಲ. ಅವನು ಯಾವಾಗಲೂ ಹೆಂಡತಿಯನ್ನು ಅಂಕಿತದಲ್ಲಿಡಲಿಕ್ಕೆ ಪ್ರಯತ್ನಿಸುತ್ತಾನೆ. ಮತ್ತು........

ಕಮಲಾ—ಒಮ್ಮೊಮ್ಮೆ ಮುದುಕನ ಹೆಂಡತಿಯನ್ನು ಓಡಿಸಿಕೊಂಡು ಹೋಗಲಿಕ್ಕೆ ಪ್ರಯತ್ನಿಸುತ್ತಾನೆ. ರಾಯರೇ ನಿಮಗೆ ಬುದ್ಧಿಯಿದ್ದರೆ ಇಷ್ಟರಿಂದಲೇ ಸುಮ್ಮನಾಗುದು ನೆಟ್ಟಗೆ. ಕೈಕಾಲುಗಳನ್ನು ಸರಿಯಾಗಿ ಉಪಯೋಗಿಸಲಿಕ್ಕೆ ಸಹ ಶಕ್ತಿಯಿಲ್ಲದಿರುವ ನಿಮ್ಮಂಥ ಮುದುಕರಿಗೆ ತರುಣಿಯರ ಆಶೆಯೇಕೆ? ನಮ್ಮನ್ನೇನು 'ಕುಣಿಸಿದಂತೆ ಕುಣಿಯಲಿಕ್ಕೆ ರಬ್ಬರಿನ ಗೊಂಬೆಗಳೆಂದು ತಿಳಿದಿರೇನು? ಮಹಾರಾಯಾ, ರಾವಬಹಾದ್ದೂರ ಪದವಿಯನ್ನು ದೊರಕಿಸಬೇಕಾದರೆ ಎಷ್ಟು ಅನ್ಯಾಯಗಳನ್ನು ಮಾಡಿದೆಯೋ ಏನೋ? ಮುಪ್ಪಿನ ವಯಸ್ಸಿನಲ್ಲಾದರೂ ಹರಿಹರಿಯೆಂದು ಭಜನ ಮಾಡಿ ಆ ಪಾಪವನ್ನು ಕಳಕೋ.

ವಿನಾಯಕ—ಹು! ಹು! ನಾಲಿಗೆಯನ್ನು ಬಹಳ ಉದ್ದವಾಗಿ ಬಿಟ್ಟೆ!

ಕಮಲಾ—ಇಂಥ ಹುಲ್ಲು ಬೆದರಿಕೆಗೆ ಬೆದರುತ್ತೇನೆಂದು ತಿಳಿಯಬೇಡಿರಿ. ಇನ್ನು ಇಷ್ಟಕ್ಕೇ ಬಿಟ್ಟದ್ದು ನಿಮ್ಮ ಪುಣ್ಯ.

ವಿನಾಯಕ—ಹು! ಹೀಗೇನು! ಎಲ್ಲಿದ್ದಾಳೆ ಆ ರಮಾ?

ರಮಾ—(ಓಡಿಬಂದು)ರಾಯರೇ, ರಾಯರೇ, ಏನದು, ಆಯಿತೇನು?

ವಿನಾಯಕ—(ಅಣಕಿಸಿ) ಏನದು ಆಯಿತೇನು? ಮುಂದೆ ಆಗುವದನ್ನು ನೋಡಿಕೋ! ತಾಯಿ-ಮಕ್ಕಳಿಬ್ಬರಿಗೂ ತುರಂಗದ ದಾರಿಯನ್ನು ತೋರಿಸುತ್ತೇನೆ.

ಪದ—ಪಾತಕಿಯೇ ಘಾತಿಸಿದೆ ಘನ ಪ್ರೀತಿಯ ಮಾತುಗಳಾಡುತಲೆನ್ನನು|| ಛೀ ದುರಾತ್ಮಳೆ ನಿನ್ನ ವಿಲಾಸವ | ಸಾಧಿಸಲೆನ್ನುತೆ ಧನವನು ಸೆಳೆದಿಹೆ || ೧ || ಕಾಮಿನಿಯರ ಮನ ಸೌದಾಮಿನಿಯಂತೆ | ಭೂಮಿಯೊಳಗೆ ಸುಖ ಲೇಶವ ತೋರದು ||

ನನ್ನ ಬಾಗಿಲೆದುರಿಗೆ ನಿಮ್ಮನ್ನು ನಾಯಿಯಂತೆ ಹೊರಳಾಡಲಿಕ್ಕೆ ಹಚ್ಚದಿದ್ದರೆ ರಾವಬಹಾದ್ದೂರನೇ ಅಲ್ಲ. (ಹೋಗುತ್ತಾನೆ)

ಕಮಲಾ—ಹೋಗು ಮುದಿ ಕಪಿಯೇ?

ರಮಾ—ಕಮಲೆ, ರಾವಬಹದ್ದೂರರಿಗೆ ಏನಾದರೂ ದುಷ್ಟಶಬ್ದಗಳನ್ನಾಡಿದೆಯೇನು?

ಕಮಲಾ—ಅವ್ವಾ, ಇವರಿಗೆ ಮುದಿಹುಚ್ಚು ತಲೆಗೇರಿದಂತೆ ಕಾಣುತ್ತದೆ.

ರಮಾ—ಯಾಕೆ ಅವರೇನು ಮಾಡಿದರು?

ಕಮಲಾ—ಆ ಮುದಿಹದ್ದನ್ನು ನಾನು ಮದುವೆಮಾಡಿಕೊಳ್ಳಬೇಕಂತೆ. ಸುಮ್ಮನೆ ನಿನ್ನ ಮೋರೆಯನ್ನು ನೋಡಿ ಬಿಟ್ಟೆನು. ಇಲ್ಲದಿದ್ದರೆ ಆಗಲೇ ಪಾದ ಪೂಜೆಯನ್ನು ಮಾಡಿಬಿಡುತ್ತಿದ್ದೆನು.

ರಮಾ—ಅಯ್ಯೋ ಚಾಂಡಾಲಿನಿ! ಇದನ್ನೇನು ಮಾಡಿಬಿಟ್ಟೆ? ಇನ್ನು ನಾನು ಆತ್ಮಹತ್ಯೆ ಮಾಡಿಕೊಂಡ ಹೊರತು ಬೇರೆ ಉಪಾಯವೇ ಇಲ್ಲ. ದೇವಾ! ದೇವಾ! ಈ ಹುಡುಗಿಯು ಎಂಥ ವೇಳೆಯಲ್ಲಿ ಹಾಳುಮಾಡಿಬಿಟ್ಟಳಲ್ಲ. ಇನ್ನು ಅವರು ಏನು ಮಾಡುವರೋ ಏನೋ ಯಾರಿಗೆ ಗೊತ್ತು? ಹಾಳಾದವಳೇ, ನಿನ್ನ ಬುದ್ಧಿಯು ಎಲ್ಲಿ ಹೋಯಿತು?

ಕಮಲಾ—ಅವ್ವಾ, ಅರವತ್ತು ವರುಷದ ಮುದುಕನು ತನ್ನ ಮಗಳಂತಿರುವ ಒಬ್ಬ ಯುವತಿಯನ್ನು ಮದುವೆಮಾಡಿಕೊಳ್ಳಲಿಚ್ಛಿಸಿದರೆ ನೀನು ಬೈಯುವದನ್ನು ಬಿಟ್ಟು ಪುನಃ ನೀನೂ ಅವನಂತೆಯೇ ಮಾತನಾಡುವಿಯಲ್ಲ?

ರಮಾ—ಕಮಲಾವತೀ, ರಾವಬಹಾದ್ದೂರರ ಸ್ವಭಾವವು ನಿನಗೆ ಗೊತ್ತು ಇಲ್ಲ. ಅವರು ಆನಂದದಿಂದಿರುವವರೆಗೆ ನಮ್ಮದೆಲ್ಲ ಚಂದ. ಅವರಿಗೆ ಸಿಟ್ಟು ಬಂತೆಂದರೆ ಎಂಥೆಂಥವರೇ ಉರುಳಿಬೀಳುವಾಗ ನಮ್ಮಂಥ ಬೇಲಿಯಲ್ಲಿಯ ಓತೀ

ಕಾಟಗಳ ಪಾಡೇನು? ಅವರು 'ಹಾ' ಎಂದರೆ ಸಾಕು, ನಿನ್ನ ಈ ತಾಯಿಯ ಕೈಕಾಲುಗಳಲ್ಲಿ ಬೇಡಿಗಳು—ದೇವಾ, ಈಗ ಯಾವ ರೀತಿಯಿಂದ ರಾವಬಹಾದ್ದೂರರ ಮನಸ್ಸನ್ನು ಶಾಂತಮಾಡಲಿ? (ಅಳುವಳು)

ಕಮಲಾ—ಅವ್ವಾ ಆ ಮುದುಕನೊಡನೆ ನಾನು ಮದುವೆ ಮಾಡಿಕೊಳ್ಳಬೇಕೆಂದಿರುವದೇನು?

ರಮಾ—ಹೌದು. ಹೌದು. ನನಗಾಗಿ ನೀನು ಅವರೊಡನೆ ಲಗ್ನವಾಗಬೇಕು.

ಕಮಲಾ—ನಿನ್ನ ಸ್ಮಶಾನ ಯಾತ್ರೆಗೆ ಹೋಗುವ ಪ್ರೇತದ ಕೊರಳಲ್ಲಿ ಮಗಳನ್ನು ಕಟ್ಟಿ ಜೀವಂತ ಆಕೆಯನ್ನು ಸುಡುವ ಇಚ್ಛೆಯು ತಾಯಿಗೆ ಆಗಬೇಕೇ? ಅವ್ವಾ, ಕುಬೇರನ ಭಾಂಡಾರವನ್ನು ಕೊಟ್ಟರೂ ಇಪ್ಪತ್ತು ವರುಷದ ನವತರುಣಿಯು ಅರವತ್ತು ವರ್ಷದ ಮುದುಕನ ಕೊರಳಿಗೆ ಮಾಲೆಯನ್ನು ಹಾಕುವಳೇ?

ರಮಾ—ಆದರೆ ಮಗಳೇ, ತಾಯಿಯ ಮಾನವನ್ನುಳಿಸುವದಕ್ಕೆ ದೇಹವಿಕ್ರಯವನ್ನು ಮಾಡಬೇಕಾಗಿ ಬಂದರೂ ಹಿಂಜರಿಯದಿರುವದು ಮಗಳ ಕರ್ತವ್ಯವಲ್ಲವೇ?

ಕಮಲಾ—ಅವ್ವಾ, ನೀನು ಹೇಳುವದರ ಅರ್ಥವೇ ನನಗಾಗುವದಿಲ್ಲ.

ರಮಾ—ಕಮಲಾವತೀ, ಡಾ. ವಸಂತರಾಯರ ಮೇಲೆ ನಿನ್ನ ಪ್ರೇಮವಿರುವದು ನನಗೆ ಗೊತ್ತದೆ; ಮತ್ತು ವಸಂತರಾಯರಂಥ ಸದ್ಗುಣಿ ಅಳಿಯನೊಡನೆ ನೀನು ಆನಂದದಿಂದ ಸಂಸಾರ ಮಾಡಿಕೊಂಡಿರುವದನ್ನು ನೋಡಬೇಕೆಂದು ನನಗೂ ಉತ್ಸಾಹವದೆ. ಆದರೇನು ಮಾಡಲಿ? ಮಗಳೇ, ನಮ್ಮ ದುರ್ದೈವದ ಮೂಲಕವಾಗಿ ನಾವೀಗ ಎರಡನೆಯವರ ಬೊಗಸೆಯಿಂದ ನೀರು ಕುಡಿದ ಹೊರತು ಗತ್ಯಂತರವಿಲ್ಲ.

ಕಮಲಾ—ಅವ್ವಾ, ನೀನು ಧನಾಯುಕರಾಯರ ಸಂಪತ್ತಿಗೆ ಬಲಿಬಿದ್ದಂತೆ ಕಾಣುತ್ತದೆ.

ರಮಾ—ಹೂ, ಆ ಸಂಪತ್ತಿಗೆ ಬೆಂಕಿ ಹಚ್ಚು. ರತ್ನದಂಥ ನನ್ನ ಮಗಳ ಮುಂದೆ ಆ ಸಂಪತ್ತನ್ನೇನು ಸುಡಲಿ? ಆದರೆ ಈಗ ನನ್ನ ಒಳಿತು-ಕೆಡಕುಗಳೆಲ್ಲ ಅವನ ಒಂದೇ ಒಂದು ಶಬ್ದದ ಮೇಲೆ ನಿಂತಿವೆ. ದೇವಾ, ನನಗೆ ಈ ಅರಿಷ್ಟವೆಲ್ಲಿಂದ ಗಂಟು ಬಿತ್ತು! ಇಂಥ ಬಂಗಾರದಂಥ ಮಗಳ ಕುತ್ತಿಗೆಯನ್ನು

ಕೊಯ್ಯುವ ನಾನು ಚಾಂಡಾಲಿನಿಯಲ್ಲವೇ? ಮಗಳೇ ಇಂಥ ದುರದೃಷ್ಟಳ ಹೊಟ್ಟೆಯಲ್ಲಿ ನೀನೇಕೆ ಹುಟ್ಟಿದೆ? ನಾನು ನಿನ್ನ ತಾಯಿಯಲ್ಲ; ಹಿಂದಿನ ಜನ್ಮದ ವೈರಿ! ರಾಕ್ಷಸಿ!

ಕಮಲಾ—ಅವ್ವಾ, ನೀನು ವಿನಾಯಕರಾಯರಿಗೆ ಇಷ್ಟೇಕೆ ಹೆದರುತ್ತೀ?

ರಮಾ—ಮಗಳೇ ಅದಕ್ಕೊಂದು ಕಾರಣವುಂಟು.

ಕಮಲಾ—ಅದನ್ನು ನನಗೆ ಹೇಳುವಂತಿಲ್ಲವೇನು?

ರಮಾ—ಅಂಥ ರಹಸ್ಯವಾದದ್ದೇನೂ ಅಲ್ಲ. ಹೊಟ್ಟೆಯ ಕರುಳಿನೆದುರಿಗಲ್ಲದೆ ಇನ್ನಾರಿಗೆ ಹೇಳಲಿ?

ಕಮಲಾ—ಹಾಗಿದ್ದರೆ ಹೇಳು. ನಿನ್ನ ದೀನ ಮುಖಮುದ್ರೆಯನ್ನು ನೋಡಿ ನನಗೆ ಅಳುವು ಬರುತ್ತದೆ.

ರಮಾ(ಸ್ವಗತಂ)—ಈಗಲೀಗ ಕಾರ್ಯಸಾಧಿಸಿಕೊಳ್ಳಬೇಕು. (ಪ್ರಕಾಶಂ) ಮಗಳೇ, ಏನು ಹೇಳಲಿ?

ಪದ—ಪ್ರೇಮಭಾವೇ, ಎಂಬಂತೆ.

ಹೀನವಾದಾ ಧನವಿಲಾಸವನುನಾಂ ಪೇಳುವೆ ಕುವರಿ ‖ ಪ ‖

ಹಣವುಳ್ಳವನೇ ಗುಣವಂತನೂ ತಾ | ಘನಚತುರನು ತ್ರಯಿಯಾವಿದಿತ ಸುಕುಲಜನು |
ವನಿತಾಜನ ಮನೋಹಾರಕ ಮದನನು | ಧನವನೆ ಸತತಾಶ್ರಯಿಪರು ಮನುಜರು ‖ ೧ ‖

ಕಮಲಾಪತೀ, ನನ್ನ ಹಣೆಯ ಮೇಲಿನ ಕುಂಕುಮವು ಹೋಗಿ ಈಗ ಹನ್ನೆರಡು ವರ್ಷವಾಯಿತು. ಆಗ ನೀನು ಕೇವಲ ಎಂಟು ವರ್ಷದವಳಿದ್ದೆ. ಮನೆತನದ ಸ್ಥಿತಿಯು ಹೇಗಿತ್ತೆಂಬದು ನಿನಗೆ ಗೊತ್ತಿರಲಾರದು. ಅವರ ಮರಣಾನಂತರದಲ್ಲಿ ಇದ್ದಬಿದ್ದ ಆಭರಣಗಳನ್ನು ಮಾರಿ ಹಾಗೂ ಹೀಗೂ ಕೆಲವು ದಿವಸ ಸಾಗಿಸಿದೆನು. ಆ ಮೇಲೆ ಮಾಡುವದೇನು? ಗಂಡನ ಮನೆಯವರು ಯಾರೂ ಇಲ್ಲ, ತವರುಮನೆಯವರೂ ಯಾರೂ ಇಲ್ಲ. ನಿರಾಧಾರ ವಿಧವಾ! ಬಳಿಯಲ್ಲಿ ನಕ್ಷತ್ರದಂಥ ಮಗಳು! ಅಲ್ಲಲ್ಲಿ ಕೈಗಡ ಕಟ್ಟುಗಡ ಮಾಡಿ ಹಾಗೂ ಹೀಗೂ ಕೆಲವು ದಿವಸ ಸಾಗಿಸಿದೆನು. ಆ ಮೇಲೆ ಸಾಲವು ಹುಟ್ಟುವದೂ ನಿಂತಿತು. ಮಗಳೇ, ಇಲ್ಲಿಯ ವರೆಗೆ ಎಷ್ಟು ಜನರ ಕೈಕಾಲು ಹಿಡಿದೆನು, ಎಷ್ಟು ಜನರ ಮನೆಯ ದಾಸಿಯಾಗಿದ್ದೆನು. ಎಷ್ಟು ಉಪವಾಸ ವನವಾಸ ಮಾಡಿದೆನೆಂಬದು ಆ ದೇವರೊಬ್ಬರಿಗೇ ಗೊತ್ತು! ಕಮಲೇ, ನಿನ್ನ ಕೋಮಲ ಮನಸ್ಸಿಗೆ ತಳ

ಮಳವಾದರೆ, ಜಗತ್ತಿನಲ್ಲಿ ಈಗಲೀಗ ಅರಳುತ್ತಿರುವ ಕಮಲವು ಮಂಜಿನ ಹೊಡತದಿಂದ ಉದುರಿ ಬಿದ್ದೀತೆಂಬ ಅಂಜಿಕೆಯಿಂದಲೂ, ಅಭ್ಯಾಸಕ್ಕೆ ತೊಂದರೆಯಾದೀತೆಂಬ ಭೀತಿಯಿಂದಲೂ ಇಲ್ಲಿಯವರೆಗೆ ನಾನೆಷ್ಟು ಜನರಿಂದಾದ ಅಪಮಾನವನ್ನು ಸಹಿಸಿರುವೆನೆಂಬದರ ಕಲ್ಪನೆಯು ನಿನಗಿರಲಾರದು. ಇನ್ನು ಮೇಲೆ ಮಗಳೇ ನಿನ್ನ ಸಲುವಾಗಿ ನಾನು ಆಚರಿಸಿದ ಘೋರಪಾತಕವನ್ನು ಈ ಬಾಯಿಂದಲೇ ಹೇಳುವೆನು ಕೇಳು. ರಾವಬಹಾದ್ದೂರರ ಅಣ್ಣನ ಮಗಳ ಲಗ್ನಕ್ಕೆ ನಾವು ಹೋದ ವರ್ಷ ಹೋಗಿದ್ದಿಲ್ಲವೇ? ವಿನಾಯಕರಾಯರಿಗೂ ನಮಗೂ ಸ್ವಲ್ಪ ತವರುಮನೆಯ ಸಂಬಂಧವಿದ್ದದ್ದರಿಂದ ನಾನು ಆ ಮನೆಯಲ್ಲಿ ಎಲ್ಲಕಡೆಗೂ ಹೋಗಲಿಕ್ಕೂ ಬರಲಿಕ್ಕೂ ಆತಂಕವಿದ್ದಿಲ್ಲ. ಲಗ್ನದ ಎರಡನೆಯ ದಿವಸ ನಾವೆಲ್ಲರೂ ವಧೂವರರ ಚೇಷ್ಟೆ ಮಾಡುವದರಲ್ಲಿ ತೊಡಗಿದಾಗ ಏನೋ ಕೆಲಸದ ನಿಮಿತ್ತವಾಗಿ ಮಹಡಿಯ ಮೇಲೆ ರಾವಬಹಾದ್ದೂರರ ಕೋಣೆಯಲ್ಲಿ ಹೋದೆನು. ಆಗ ಪಲ್ಲಂಗದ ಮೇಲೆ ಒಂದು ಚಂದ್ರಹಾರವೂ ಕಂಠಿಯೂ ಬಿದ್ದಿದ್ದವು. ಎಡಬಲದಲ್ಲಿ ಯಾರೂ ಇದ್ದಿಲ್ಲ. ಕಮಲಾವತೀ, ಮನುಷ್ಯನಿಗೆ ದಾರಿದ್ರ್ಯದಂಥ ಶತ್ರುವಿಲ್ಲ. ಅದೇ ಎಲ್ಲ ದುರ್ಗುಣಗಳನ್ನು ಕಲಿಸುವದು. ನನ್ನ ಮನಸ್ಸಿನಲ್ಲಿಯೂ ಪಾಪವುಂಟಾಯಿತು. ಹೋಗಿ ಮೆಲ್ಲಗೆ ಅವುಗಳನ್ನು ತಕ್ಕೊಂಡು ತಿರುಗಿ ನೋಡುತ್ತೇನೆ, ರಾವಬಹಾದ್ದೂರರು ಬಾಗಿಲಲ್ಲಿ ಬಂದು ನಿಂತಿದ್ದರು. ಮಗಳೇ, ಏನು ಹೇಳಲಿ, ಒಮ್ಮೆಲೆ ಕಣ್ಣಿಗೆ ಕತ್ತಲೆಗುಡಿಸಿತು. ಹಿಂದುಮುಂದುಗಾಣದೆ ಅವರ ಪಾದದ ಮೇಲೆ ಬಿದ್ದು ಅಳಹತ್ತಿದೆನು. ಆಗಲೇ ನಾನು ಆತ್ಮಹತ್ಯೆ ಮಾಡಿಕೊಳ್ಳಬೇಕಾಗಿತ್ತು; ಆದರೆ ನಿನ್ನನ್ನಷ್ಟು ಮಾರ್ಗಕ್ಕೆ ಹಚ್ಚಿ ಆ ಮೇಲೆ ಈ ಪಾಪಿದೇಹವನ್ನು ತ್ಯಾಗಮಾಡಬೇಕೆಂದು ನಿಶ್ಚಯಿಸಿದೆನು.

ಕಮಲಾ—ಆಃ! ದಾರಿದ್ರ್ಯವೆಂಬದು ಬಹು ಕೆಟ್ಟದು. ಈ ಬಡತನವೇ ಸರ್ವ ಅನರ್ಥಗಳ ಮೂಲವಿರುವದಲ್ಲದೆ, ಇದ್ದ ಸದ್ಗುಣಗಳನ್ನು ಸಹ ನಾಶ ಮಾಡುತ್ತದೆ. ಅವ್ವಾ, ನಿನಗೆ ಇಂಥ ದುರ್ಬುದ್ಧಿಯೇಕೆ ಹುಟ್ಟಿತು? ಆ ಮೇಲೇನಾಯಿತು?

ರಮಾ—ಮಗಳೇ ಏನೆಂದು ಹೇಳಲಿ? ರಾವಬಹಾದ್ದೂರರು ಆ ಎರಡೂ ಆಭರಣಗಳನ್ನು ಕೈಯಲ್ಲಿ ತಕ್ಕೊಂಡು—"ರಮಾಬಾಯೀ, ನೀನು ಈ ದುಷ್ಕೃತ್ಯವನ್ನು ಮಾಡಿ ನಮ್ಮ ಮನೆತನಕ್ಕೆ ಮಸಿಹಚ್ಚಿದೆ. ಬೇರೆಯವರಾಗಿದ್ದರೆ ಇಷ್ಟೊತ್ತಿಗೆ ತುರಂಗದ ದಾರಿ ಹಿಡಿಸಿ ಎಷ್ಟೋ ವೇಳೆಯಾಗುತ್ತಿತ್ತು. ಈಗ ಕಮ

ಲಾವತಿಯನ್ನು ನನಗೆ ಕೊಡುವೆನೆಂದು ವಚನ ಕೊಟ್ಟರೆ ನಿನ್ನನ್ನು ಬಿಡುತ್ತೇನೆಂದು" ಹೇಳಿದರು. ಕಮಲಾವತಿ, ಬೇಡವೆಂದು ಎಷ್ಟೋ ಬಿದ್ದು ಬೇಡಿಕೊಂಡೆನು; ಆದರೆ ಏನೂ ಫಲವಾಗಲಿಲ್ಲ. ನಿರುಪಾಯಳಾಗಿ ನಿನ್ನನ್ನು ಅವರಿಗೆ ಕೊಡುವದಕ್ಕೆ ಒಪ್ಪಿದೆನು. ಮಗಳೇ, ಇಲ್ಲಿಗೆ ನನ್ನ ಕರ್ಮಕಥೆಯು ಮುಗಿಯಿತು. ಇನ್ನು ನಿನ್ನ ತಾಯಿಯನ್ನು ಉಳಿಸುವದೂ ಕೊಲ್ಲುವದೂ ನಿನ್ನ ಕೈಯಲ್ಲಿಯೇ ಅದೆ. ಇದು ನಿನ್ನ ಮನಸ್ಸಿಗೆ ಬಾರದಿದ್ದರೆ, ಇಗೋ ನಿನ್ನ ತಾಯಿಯನ್ನು ತುರಂಗಕ್ಕೆ ಕಳಿಸುವದಕ್ಕಿಂತ ನಿನ್ನ ಕೈಯಿಂದಲೇ ವಿಷವನ್ನು ಕೊಟ್ಟು ನಿನ್ನ ತಾಯಿಯ ಇಹಲೋಕದ ಯಾತ್ರೆಯನ್ನು ಮುಗಿಸಿಬಿಡು.

ಕಮಲಾ—ಈಗೇನು ಮಾಡಬೇಕು? ಇತ್ತ ಬಿದ್ದರೆ ಕೆರೆ, ಇತ್ತ ಬಿದ್ದರೆ ಬಾವಿ! ಒಪ್ಪಿಗೆ ಕೊಟ್ಟರೆ ಆ ಮುದಿಹದ್ದಿನೊಡನೆ ಬಾಳ್ವೆ ಮಾಡುವದು ಹೇಗೆ? ಒಲ್ಲೆನೆಂದರೆ ಆ ನರಾಧಮನು ಉತ್ತರಕ್ಷಣದಲ್ಲಿಯೇ ತಾಯಿಗೆ ತುರಂಗದ ದಾರಿಯನ್ನು ತೋರಿಸುವನು. ಈ ಸುದ್ದಿಯನ್ನು ಕೇಳಿ ವಸಂತರಾಯನೇನೆನ್ನುವನೋ? ಪ್ರಸಂಗವಶಾತ್ ನನ್ನ ಮಾನಹರಣ ಮಾಡಲಿಕ್ಕೂ ಹಿಂದುಮುಂದೆ ನೋಡಲಿಕ್ಕಿಲ್ಲ. ದೇವಾ, ಎಂಥ ವಿಷಮ ಪ್ರಸಂಗವನ್ನು ತಂದಿರುವೆ! ಜನ್ಮ ಯಾತ್ರೆಯನ್ನುಳಿಸದಿದ್ದರೆ ಇಹ-ಪರಗಳೆರಡರಲ್ಲಿಯೂ ನನಗೆ ಸುಖವು ತಪ್ಪುವದು. ತನ್ನ ಸುಖಕ್ಕೇ ತಾಯಿಯನ್ನು ತುರಂಗಕ್ಕೆ ಕಳಿಸಿದವಳಿವಳೇ ಎಂದು ಹಣ್ಣುಹುಡುಗರಾದಿ ಸಹ ನನ್ನನ್ನು ನೋಡಿ ನಗಬಹುದು, ತಿರಸ್ಕರಿಸಬಹುದು. ದೇವಾ!

ಪದ—'ರಾಮುಶಿಲೇ ಹೋಲೀ ಜಮುನಾತಟ' ಎಂಬಂತೆ.

ದೇವ ದಯಾಸಾಗರ ಸುಗುಣಾಕರ ‖ ಪಲ್ಲ ‖ಕುರು ಸಭೆಯೊಳ್ ಪಾಂಚಾಲಿಯ ಮಾನವ | ಪೊರೆದೆ ಕುಮಾತಕನಾಕಾಯಾಧವನಂ ಸದಾ ‖ ೧ ‖ ಕರಿವರನಾ ಸಂಕಟವನು ಪರಿಸಿದೆ | ಪೊರೆ ಮುಪಂತಾಪದೆ ದೇವಾ ಕಮಲಾಧವಾ ‖ ೨ ‖

(ಪ್ರಕಾಶಂ) ಅವ್ವಾ! ಇದನ್ನೇನು ಮಾಡಿಬಿಟ್ಟೆ? ನಾನು ಆ ಮುದುಕನನ್ನು ಹಾಡಿಕೊಳ್ಳುವದರಿಂದ ನಿನಗೆ ಸಮಾಧಾನವಾಗುವದಲ್ಲವೇ? ಹೇಳು, ನಿನ್ನ ಇಚ್ಛೆಗೆ ನಾನು ದೂರತಿಲ್ಲ.

ರಮಾಬಾಯಿ—ಮಗಳೇ, ಆಗಬಾರದ ಸಂಗತಿಯು ಆಗಿಹೋಯಿತು. ನಿನ್ನಂಥ ಅರಗಿಳಿಯನ್ನು ಆ ಕಟುಕನ ಕೈಯಲ್ಲಿ ಕೊಡುವದರಿಂದ ನನಗೆ ಹೇಗೆ ಸಮಾಧಾನವಾದೀತು! ಆದರೆ ಮಾಡಿದ ತಪ್ಪಿಗಾಗಿ ಆಗುವ ಕಷ್ಟಗಳನ್ನೆಲ್ಲ ಅನು

ಭವಿಸಬೇಕಾಗಿದೆ. ನನ್ನ ಅರಗಿಳಿಯೇ, ತಿಳಿದೂ ತಿಳಿದೂ ನಿನ್ನನ್ನು ಸುಡುಗಾಡಿಗೆ ಹೇಗೆ ಧಾರೆಯೆರೆಯಲಿ! (ಎಂದು ಅಳುವಳು)

ಕಮಲಾ—ಅವ್ವಾ ಅಳಬೇಡ. ನಿನ್ನನ್ನು ಸಂಕಟಸಾಗರದಲ್ಲಿ ನೂಕಿ ನಾನು ರಾಜಸಿಂಹಾಸನದ ಮೇಲೆ ಕುಳಿತರೂ ನನಗೆ ಲವಲೇಶವೂ ಸುಖವು ದೊರೆಯಲಿಕ್ಕಿಲ್ಲ. ಮಾತೃಋಣವನ್ನು ತೀರಿಸುವದಕ್ಕಾಗಿ-ತಾಯಿಯ ಮಾನರಕ್ಷಣಕ್ಕಾಗಿ-ಹಡೆದವ್ವನ ಸುಖಕ್ಕಾಗಿ-ನಾನು ನನ್ನ ಸರ್ವ ಸುಖಗಳಿಗೂ ತಿಲೋದಕವನ್ನು ಬಿಟ್ಟು ವಿನಾಯಕರಾಯರೊಡನೆ ಲಗ್ನವಾಗಲಿಕ್ಕೆ ಸಿದ್ಧಳಾಗುತ್ತೇನೆ. ಈಗಲಾದರೂ ನಿನಗೆ ಸುಖವಾಗುವದಲ್ಲವೇ?

ರಮಾ—ನನ್ನ ಸುಖಕ್ಕಾಗಿ ಮಗಳ ಸುಖವನ್ನು ಹೇಗೆ ಮಣ್ಣುಗೂಡಿಸಲಿ! (ಎಂದು ಅಳುವಳು)

ವಿನಾಯಕ(ಬರುತ್ತ)—ಯಾಕೆ ರಮಾ, ಒಪ್ಪಿಗೆಯು ಸಿಕ್ಕಿತೋ ಇಲ್ಲವೋ? ಏನು ಪೋಲೀಸ ಸ್ಟೇಶನ್ನಿಗೆ ಹೇಳಿ ಕಳಿಸಲೋ?

ರಮಾ—ರಾಯರೇ, ತಮ್ಮಂಥವರು ಸಿಗುವದು ನನ್ನ ಮಗಳ ಸುದೈವವೇ ಸರಿ. ಪಾಪ ಸಣ್ಣ ಹುಡುಗಿ! ತಿಳಿಯದೆ ಮಾತಾಡಿದ್ದಕ್ಕೆ ಸಿಟ್ಟಾಗಬೇಡಿರಿ.

ವಿನಾಯಕ—ಗಂಡ-ಹೆಂಡಿರಲ್ಲಿ ಈ ಬಗೆಯ ಪ್ರಣಯ ಕಲಹಗಳು ಮುಂದೆಷ್ಟೋ ನಡೆಯಬಹುದು. ಅದಕ್ಕೇಕೆ ಸಿಟ್ಟಾಗುವದು?

ಪದ—ರಾಗ ಸಾರಂಗ.

ವಿನಾ—ಮನೋಹಾರಿಣಿ ಪ್ರೇಮಖಣಿ ಸಾರಸುಗುಣಿ ಮೋದಬೀರೆ ಜಾಣೆ ||ಪ||

ಅತನುರಾಣಿ ಸುಕಲವಾಣಿ ಉರಗವೇಣಿ ಕಮಲಪಾಣಿ |

ಸತತ ತಪಿಸುತಿರುವ ಹೃದಯ ಶಾಂತಿವಡಿಪುದು ||

ಕಮಲಾ—ವಿಶಾಲೋದರ ತಾಪಕರ ಪೇಳುವೆ ಗರಕಲಿತ ಜಾಲ ಬೀರಿ |

ತರುಣಿಯರನು ವರಿಸಿಯುವರ ತರುಣತೆಯನು ಒರದೆ ತೊರೆಸಿ |

ನರಕವಾಸನಿನಿತು ತೋರ್ಪೆ ಜೀವವಿರುತಲೇ ||

ವಿನಾ—ಬಿಡು ನೀರೇಜಮುಖಿ ಘನ ಕೋಪವ | ಕೊಡುಮದೀಯ ಮನಸಿಗೆ ಮೋದವ |

ಕಮ—ಸುಡು ತ್ವದೀಯ ವಚನವಿನೋದವ | ಬಿಡು ಕುಮಾರಿಕಾ ಕರಲಾಭವ |

ವಿನಾ—ವೃಥಾ ಕೋಪವ ದೂಡು ಸದಾ ಪ್ರೇಮಾಲಾಪವನಾಡು ದೇವಿ || ೧ ||

ಇರಲಿ ಬಿಡು ರಮಾಬಾಯಿಾ, ಮುಹೂರ್ತವನ್ನು ಎಂದು ನಿಯಮಿಸೋಣ?

ರಮಾ—ತಮ್ಮ ಇಚ್ಛೆಗೆ ನಾವು ಹೊರತಿಲ್ಲ.

ವಿನಾ—ನಮಗೆ ಹುಚ್ಚು ಹಿಂದೂಪದ್ಧತಿಯು ಮೇಲೆ ವಿಶ್ವಾಸವಿಲ್ಲ. ನಮ್ಮ ಲಗ್ನಕ್ಕೆ ಎಲ್ಲ ಮಡಮ್-ಸಾಹೇಬರೂ ಬರುವದಕ್ಕೆ ಅನುಕೂಲವಾಗಬೇಕೆಂದು ಮುಂದಿನ ರವಿವಾರವೇ ಲಗ್ನವನ್ನಿಡೋಣ.

ರಮಾ—ಆಗಲಿ.

ವಿನಾ—ಹಾಗಾದರೆ ಇನ್ವಿಟೇಶನ್‌ಕಾರ್ಡುಗಳನ್ನು ಛಾಪಿಸಲಿಕ್ಕೆ ಹೇಳುತ್ತೇನೆ.

ರಮಾ—ಆಗಬಹುದು.

ವಿನಾ—ಕಮಲಾವತೀ ಬೆದರಬೇಡ, (ಎಂದು ಎದ್ದು ಕೈ ಹಿಡಿಯಹೋಗುವನು. ಇಬ್ಬರೂ ಕೆಕ್ಕರಿಸಿ ನೋಡುತ್ತ ನಿಲ್ಲುವರು.)

೧ನೇಯ ಅಂಕವು ಮುಗಿದುದು.

---

# ೨ನೆಯ ಅಂಕ.

## ಪ್ರವೇಶ—೧

(ಸ್ಥಳ—ರಸ್ತೆ. ದಾಸಯ್ಯನು ಸೆರೆಬಾಟ್ಲಿ ಮತ್ತು ಲಗ್ನಪತ್ರ ಹಿಡಿದುಕೊಂಡು ಬರುವನು)

ದಾಸಯ್ಯ—ಮನುಸ್ಯಾಗ ಒಮ್ಮೆ ಏಳುವ ಕಾಲ ಬಂದುಬಿಟ್ಟರೆ ಬ್ರಹ್ಮನ ಮಗ ಸಹ ಅದನ್ನು ತಪ್ಪಿಸಲಾರ ನೋಡ್ರಿ. ಇದ ಊರಾಗ ಹಗಲೆಲ್ಲ ಕೂಲಿ ಕುಂಬಳಿ ಮಾಡಿ ಅರಹೊಟ್ಟೆ ಉಣ್ಣಾ ಜನರು ಎಷ್ಟು ಜನರದಾರ ಅಂತ ಹೇಳಬೇಕ್ರಿ! ದುಡದ ತಿನ್ನುದು ಅದು ಒಂದು ಬಿಸಿನ! ಸುಮ್ಮನ ಇಂತ ರಾಯಬಾದ್ದೂರ ಮನೆ ಬಾಗಿಲ ಕಾದುಕೊಂಡಿದ್ದಬಿಟ್ರ ಕೂಳಿನ ಚಿಂತೀನ ಇಲ್ಲ. ಕೂಳಾರ ಯಾವ ಸೂಳೀಮಗ್ಗ ಬೇಕಾಗೇತಿ? ನೋಡಿರಿ ಇಲ್ಲಿಕೈಯಿಂದ. (ಕುಡಿಯುತ್ತ)

ಪದ—ಕಾಸಿಗೆ ಕೈಲಾಸ ಕಾಣಸ್ತೈತೆ ಸೆರೆಯಿದು ‖ ಪಲ್ಲ ‖ ಆಶೆ ತೋರಿಸುತ ವಿಲಾಸ ಬೀರಿಸುತ್ತ | ದಾಸನ್ನ ದೇವನನು ಗೈಯುತ ಸಂತತ ‖ ೧ ‖ ದೇಯ ತಾಪಹಾರಿ | ಏದೇಯ ದೂರಕಾರಿ | ಸಾರಸುಖಂಕರಿ | ಜಣಾರ್ದಬವಹರಿ ‖ ೨ ‖

ಈ ನಿಶಾ ಮಾಡದಕ್ಕಾಗೇ ದೇವ್ರು ರಾತ್ರಿಗೆ 'ನಿಶಾ' ಅಂತ ಹೆಸರಿಟ್ಟಾಂಗ ಕಾಣತೈತಿ. ನಮ್ಮ ಮೇಲಿನ ದಣೇರ ಬೇಕಾದಾಂಗ ಕುಡುವತಾರು, ನಮ

ಗೇನು ಹೆದರಿಕೆ! ಒಂದು ಗುಟುಗು ಹೊಟ್ಯಾಗ ಹೋತಂದ್ರ ಹೊಡಿತ ಕೋಲ್ ಮಿಂಚ ಕಣ್ಣಾಗ, ಇಳಿತ ಇಂದ್ರನ ಸಭಾ ಭೂಮಿ ಮ್ಯಾಗ! ಸಿಕ್ಕಿತ ಸ್ವರ್ಗ ಕೈಯಾಗ!!

ವಿಶ್ವಾಸರಾವ(ಬಂದು)—ಇಲ್ಲಿ ಯಾವನೋ ನೆರೆಗುಡುಕನು ಕುಳಿತಿರುವನು. (ನೋಡಿ) ಓಹೋ! ಆ ದಿವಸ ವಿನಾಯಕರಾಯರಲ್ಲಿ ಸೇವಕನಾಗಿ ಹೋದ ಗೋವಿಂದಯ್ಯ. ನೋಡಿರಿ. ಹೊಟ್ಟೆಗಿಲ್ಲದೆ ತಿರುಗುತ್ತಿದ್ದ ಇವನು ಶ್ರೀಮಂತರ ಸಹಾಯದಿಂದ ಹೊಟ್ಟೆ-ಬಟ್ಟೆಗಳೆರಡನ್ನೂ ನಾಶಮಾಡುವ ಸುರಾಪಿಶಾಚಿಗೆ ಒಳಗಾಗಿ ಬಿಟ್ಟನು. ಸ್ವಲ್ಪ ಇವನ ಸಮಾಚಾರ ತೆಗೆದುಕೊಳ್ಳೋಣ. (ದಾಸಯ್ಯನಿಗೆ) ಎಲೋ ನೀನು ಯಾರು?

ದಾಸಯ್ಯ—ಏ, ಯಾರವರು? ಗೋಳೀಬಾರು 'ಢಂ' ಅನ್ನಿಸಿಬಿಟ್ಟೇನು!

ವಿಶ್ವಾಸ—ಎಲೋ, ನಾನು ಯಾರೆಂದು ತಿಳಿದಿರುವೆ?

ದಾಸಯ್ಯ—ಅಯ್ಯಯ್ಯಪ್ಪ ಬಿಳೇ ಟೊಪಿಗಿ! (ದಿಟ್ಟಿಸಿ ನೋಡಿ) ವಿಶ್ವಾಸರಾಯರು! ತಪ್ಪಾತ ನನ್ನೊಡೆಯಾ ಕಾಲಿಗೆಬೀಳ್ತೇನಿ! ನಿನ್ನಿಂದ ತುತ್ತುಅನ್ನ ಕಂಡೆ!

ವಿಶ್ವಾಸ—ಎಲೋ, ಬಡತನದಿಂದ ಬಳಲುತ್ತಿರುವ ನಿನಗೆ ಈ ಹಾಳಾದ ಚಟವೆಲ್ಲಿಂದ ಗಂಟು ಬಿತ್ತು?

ದಾಸಯ್ಯ—ನಮ್ಮ ರಾವಬಹಾದ್ದೂರರು ಕುಡುವತಾರಲ್ರೀ?

ವಿಶ್ವಾಸ—ನೋಡು ಇನ್ನು ಸ್ವಲ್ಪ ದಿವಸ. ಈ ಕುಡಿತ, ಈ ಸಾಹೇಬ ಮಡಮ್ಮರ ಗೆಳೆತನದಿಂದ ಇನ್ನು ಸ್ವಲ್ಪ ದಿವಸಗಳಲ್ಲಿ ಆತನು ನಿನ್ನಂತೆಯೇ ಮಂದೀ ಮನೆಯ ಬಾಗಿಲು ಕಾಯಲಿಕ್ಕೆ ಹತ್ತುವನೋ ಇಲ್ಲವೋ ನಿನಗೇ ತಿಳಿಯುವದು.

ದಾಸಯ್ಯ—ಹೌದು ಬಿಡ್ರಿ! ಮೊದಲು ಅಪ್ಪನವರು ಇದ್ದಹಾಂಗ ಇಲ್ಲ ಈಗ! ಅವಾಗಿನ ದಾಗೀನ ದಪ್ಪಡಿ ಕಾಣದ ಇಲ್ಲ. ಇತ್ತಿತ್ತಲಾಗ ಬರೇ ಉದ್ರಿ ಸಾಮಾನ ತರಸೂದು ಬಾಳ ಆಗೇತಿ. ಮನಸೂ ನೆಟ್ಟಗಿಲ್ಲ. ಕುಡಿದಾಗಂತೂ ಯಾರೂ ಹತ್ತಿರ ಇರಬಾರದು ನೋಡ್ರಿ.

ವಿಶ್ವಾಸ—ನಿನ್ನಷ್ಟಕ್ಕೆ ನೀನೇತಿಳಿದು ನೋಡು. ಈ ಕೆಟ್ಟ ಚಟವನ್ನು ಬಿಡದೆ ಹೋದರೆ ನಿನ್ನ ಹಣೆಯು ಬಾಸಿಂಗವನ್ನೇ ಕಾಣಲಿಕ್ಕಿಲ್ಲ.

ದಾಸಯ್ಯ—ಹೌದ್ರಿ ಎಪ್ಪ! ನೋಡ್ರಿ ಈ ನೆರೆದ ಗುಂಗಿನ್ಯಾಗ ಹೊರಟ

ಕೆಲಸಾನ ಮರತಬಿಟ್ಟಿದ್ದೆ. ಜಾಸಿಂಗ ಅಂದ ಕೂಡ್ಲೆ ನೆನಸಾತು! ಹಿಡಿರಿ. ನಮ್ಮ ರಾವಬಾದ್ದೂರ ಮದಿವಿ ಪತ್ರ! ಹೋಗತೇನ್ರಿ ಇನ್ನು ಎಂದೂ ನೆರೆ ಕುಡೂದಿಲ್ಲ (ಹೋಗುವನು)

ವಿಶ್ವಾಸ—ಅಂತು ಕಾಲವು ಕೆಟ್ಟಿತು. 'ವೃದ್ಧವರ ರಾವಬಹಾದ್ದೂರ ವಿನಾಯಕರಾವ ವಿಶಾಲೋದರ ಮತ್ತು ಕುಮಾರಿ ಕಮಲಾವತಿ ವಿರಜಕರ ಇವರಿಬ್ಬರಿಗೆ ವಿವಾಹಂ, ಆಃ

ಪದ—ಕಾರಿ ಒದರಿಯಾ ಎಂಬಂತೆ.

ಪ್ರಾಯದ ದಾಂಪತ್ಯದೆ ಜನಿಪ ದೃಢ | ಕಾಯದ ಸುತರಿಂ ದೇಶೋದ್ಧಾರವು ||
ತರುಣೀ ಜರಠ ವಿವಾಹದೆ ನಿರ್ಬಲ | ತರಳರುದಿಸಲಾ ನಾಡು ಕೆಡುವದು ||೧||

ಹಿಂದುಸ್ತಾನದಲ್ಲಿ ವಿಧವಿಧ ತಾಪದಿಂದ ಬಳಲುತ್ತಿರುವ ಜನರ ಉದ್ಧಾರಕ್ಕಾಗಿ ಹೊರಟಿರುವ ವಿಧವಾವಿವಾಹ ಸಂಘ, ಗೋರಕ್ಷಣ ಸಂಘ, ಅನಾಥ ಬಾಲಿಕಾಶ್ರಮ, ವೈದಿಕವಿದ್ಯಾಪ್ರಸಾರಕ ಮಂಡಲಿ, ಆಯುರ್ವೇದ ಪ್ರಸಾರಕ ಸಮಿತಿ, ಲೋಕಮಾನ್ಯಫಂಡು ಇವುಗಳಿಗೆ ಒಂದು ಕಾಸನ್ನು ಸಹ ಕೊಡಲಿಕ್ಕೆ ಯಾರ ಕೈಯೂ ಏಳುವದಿಲ್ಲ. ಸ್ವತಃ ಈ ರಾವಬಹದ್ದೂರರಿಗೇ ಮೊನ್ನೆ ಸ್ವರಾಜ್ಯ ಫಂಡು ಕೇಳಿದರೆ ಏನೂ ಕೊಡಲಿಲ್ಲ. ಇಂದು ನೋಡಿದಿರಾ, ಆ ಸುಶೀಲ ಬಾಲೆಯ ಪಾತಿವ್ರತ್ಯವನ್ನು ಹಾಳುಮಾಡುವದಕ್ಕಾಗಿ ಮದುವೆ ಮಾಡಿಕೊಳ್ಳುವದಕ್ಕೆಂದು ಹತ್ತು ಸಾವಿರ ಆಮಂತ್ರಣ ಪತ್ರಿಕೆಯನ್ನು ತೆಗೆಸಿರುವರು. ಹಳೆಯದಕ್ಕೂ ಎಳೆಯದಕ್ಕೂ ಹೇಗೆ ಕೂಡಬೇಕು? ಸ್ತ್ರೀಗೆ ವೈಧವ್ಯವು ಬಂದರೆ ದೈವದ ಮೇಲೆ ಹೊರೆ ಹಾಕಿ ಹಾಗೂ ಹೀಗೂ ಕಾಲ ಕಳೆಯಬಹುದು; ಆದರೆ ಇಂಥ ಅಸಮರ್ಥ ಗಂಡನೊಡನೆ ಬಾಳ್ವೆ ಮಾಡುವದು ನರಕವಾಸಕ್ಕಿಂತಲೂ ಕಠಿಣವಾದದ್ದು. ನಾಳೆ ಈ ಮುದುಕನು ಸಾಯುವಾಗ ಹೊಟ್ಟೆಗಾಗಿ ಆಕೆಯ ಹೆಸರಿನಿಂದ ೨೦೦ ಸಾವಿರ ರೂ. ಆಸ್ತಿಯನ್ನು ಮಾಡಬಹುದು; ಆದರೆ ಉಕ್ಕುತ್ತಿರುವ ಯೌವನಕ್ಕೇನು ಹೇಳುವನು? ಆಕೆಯು ಸಹಸಾ ದುರ್ಮಾರ್ಗದಲ್ಲಿ ಕಾಲಿಟ್ಟರೆ ಅದಕ್ಕೆ ಹೊಣೆಯಾರು? ಥೂ! ದಾರಿದ್ರ್ಯದಿಂದ ಬಳಲುತ್ತಿರುವ ಈ ಭರತಖಂಡದಲ್ಲಿ ದುಡ್ಡಿಗಾಗಿ ಇನ್ನೂ ಏನೇನು ಅನರ್ಥಗಳನ್ನು ಕಾಣಬೇಕಾಗುವದೋ ಏನೋ! ನೋಡೋಣ, ಅಲ್ಲಿಗೆ ಹೋಗಿ ನಡೆಯುವದನ್ನೆಲ್ಲ. (ಅಷ್ಟರಲ್ಲಿ ವಿಠ್ಠಲರಾವ, ವೆಂಕಟರಾವ, ರಾಮರಾವ ದೇಶಭಕ್ತರು ಬರುವರು) ಓಹೋ ಬರಬೇಕು. ಒಳ್ಳೇ ಹೊತ್ತಿಗೆ ಬಂದಿರಿ. ನೋಡಿದಿರೇನು ಈ ದುರವಸ್ಥೆಯನ್ನು!

ವಿಠ್ಠಲರಾವ—ಎಲ್ಲಿ ನೋಡೋಣ. (ಎಂದು ಪತ್ರಿಕೆಯನ್ನು ಕೈಯಲ್ಲಿ ತಕ್ಕೊಂಡು) ಏನು ನಮ್ಮ ರಾವಬಹಾದ್ದೂರ ವಿನಾಯಕರಾಯರಿಗೆ ಮುಪ್ಪಿನ ಕಾಲದಲ್ಲಿ ಈ ಅರಿಷ್ಟ ಕಲ್ಪನೆಯೆಲ್ಲಿಂದ ಗಂಟುಬಿತ್ತು?

ವೆಂಕಟರಾವ—ಈ ಕೆಲಸದಲ್ಲಿ ಇವರು ರಾವಬಹಾದ್ದೂರರೆಂದು ಮಾನ ಕೊಡಬೇಕು. ಬೇರೆ ಬಡವರಾಗಿದ್ದರೆ ಎಲ್ಲರೂ ಛೀ ಥೂ ಎಂದು ಉಗುಳುತ್ತಿದ್ದರು. ಅರವತ್ತು ವರ್ಷ ಮೀರಿದ ಅರಸಿಕನು ಹುಡುಗೆಯನ್ನು ಹುಡುಕುವದೆಂದರೇನು? ಇದೆಲ್ಲ ಆ ರಾವಬಹಾದ್ದೂರಕಿಯ ಸೊಕ್ಕು.

ರಾಮರಾವ—ಆದರೆ ಈ ಕಮಲಾವತಿ ಯಾರು?

ವಿಶ್ವಾಸ—ಮೊನ್ನೆ ಸಿನೇಮಾ ನೋಡಲಿಕ್ಕೆ ಹೋದಾಗ ಒಳ್ಳೇ ಪ್ರಿಯಾರದ ಮುದುಕೆಯನ್ನು ನೋಡಲಿಲ್ಲವೇ? ಆಕೆಯ ಮಗಳೇ ಕಮಲೆ.

ರಾಮ—ಹಾಗಾದರೆ ಆಕೆಯನ್ನು ನಾನು ಚೆನ್ನಾಗಿ ಒಲ್ಲೆ. ಪಾಪ! ಒಳ್ಳೇ ಸುಶೀಲ ಮತ್ತು ಕರ್ತವ್ಯದಕ್ಷ ಹುಡಿಗೆ! ಇಂಟರಕ್ಲಾಸಿನಲ್ಲಿದ್ದಾಳೆ. ಆದರೆ ಇಂಥ ಸುಶಿಕ್ಷಿತಳು ಮುದುಕನನ್ನು ಮಾಡಿಕೊಳ್ಳಲಿಕ್ಕೆ ಹೇಗೆ ಒಪ್ಪಿದಳು?

ವಿಠ್ಠಲ—ಇದಕ್ಕೆ ಒಪ್ಪಬೇಕಾದರೆ, ಆಕೆಗೆ ಜೀವದ ಮೇಲೆ ಪ್ರಸಂಗ ಬಂದಿರಲಿಕ್ಕೆ ಬೇಕು, ಇಲ್ಲವೆ ದುಡ್ಡಿನ ಮೋಹಕ್ಕೆ ಬಿದ್ದಿರಲಿಕ್ಕೆಬೇಕು. ಅಂತೂ ನಮಗೆ ಇದೊಂದು ಸುದಿನವೇ ಸರಿ. (ಅಷ್ಟರಲ್ಲಿ ಡಾ. ವಸಂತರಾಯರು ಬರುವರು.)

ವೆಂಕಟರಾವ—ಯಾಕೆ ಡಾಕ್ಟರಸಾಹೇಬ, ನೀವೂ ಬರುವಿರಲ್ಲವೇ?

ವಸಂತ—ಎಲ್ಲಿಗೆ?

ರಾಮರಾವ—ಹಿಡಿಯಿರಿ ಈ ಪತ್ರಿಕೆಯನ್ನು.

ವಸಂತ (ಅತ್ಯಾಗತಂ)—ಏನು? "ವೃದ್ಧವರ ರಾವಬಹಾದ್ದೂರ ವಿನಾಯಕರಾವ ವಿಶಾಲೋದರ ಮತ್ತು ಕುಮಾರಿ ಕಮಲಾವತಿ ಮಿರಜಕರ ಇವರ ವಿವಾಹ ಮಹೋತ್ಸವ" ಹಾಗಾದರೆ ನನ್ನ ಆಶಾನದಿಯು ಬತ್ತಿ ಹೋಯಿತು! ಕಮಲಾವತಿ, ಕೃತಘ್ನ ಕಮಲಾವತಿ....ಬೇಡ ಬೇಡ. ಆಕೆಯನ್ನು ಕಂಡು ಆ ಮೇಲೆ ಯಾವದನ್ನೂ ನಿರ್ಧರಿಸೋಣ (ಪ್ರಕಾಶಂ) ರಾಯರೇ ಅವಶ್ಯ ಕೆಲಸವಿದೆ, ಹೋಗುತ್ತೇನೆ. (ಹೋಗುತ್ತಾನೆ.)

ವಿಶ್ವಾಸ—ಇವರೇಕೆ ಇಷ್ಟು ಆಶ್ಚರ್ಯಚಕಿತರಾದರು! ಏನೋ? ಇವರಿಗೂ ಆಕೆಗೂ ಪ್ರಣಯಸಂಬಂಧವಿತ್ತೋ ಏನೋ? ಥೂ ನಿರ್ಲಜ್ಜಾ, ಏನಾ

ಯುಕ, ನಿನಗೆ ಮನಸ್ಸಿನ ಅಂಜಿಕೆ ಇಲ್ಲದಿದ್ದರೂ ಜನಸಮೂಹಕ್ಕಾದರೂ ಅಂಜಬೇಕಾಗಿತ್ತು. ಅರವತ್ತು ವರುಷದ ಅರವುಮರವು ಗಂಟುಬಿದ್ದಿರುವಾಗ ಈ ಹರೆಯದ ಹುಡುಗೆಯ ಹವ್ಯಾಸವೇಕೆ ಬೇಕಾಗಿತ್ತು? ಇನ್ನು ನಿನ್ನ ಮನೆಯೆಂದರೆ ವೇಶ್ಯಾಚಾರವನ್ನು ಮಾಡಬೇಕೆಂದಿರುವೆಯೇನು? (ರಮಾಬಾಯಿಯು ಹೋಗುವಳು.) ಓಹೋ! ಇವರು ಯಾರು? ರಮಾಬಾಯಿಯೇ ನಿಶ್ಚಯ! ಇವಳೇ ತನ್ನ ವಿಲಾಸವೈಭವಕ್ಕಾಗಿ ಮಗಳನ್ನು, ಆ ಮುದುಕನ ಕೊರಳಿಗೆ ಕಟ್ಟಿರಬೇಕು. ಕತ್ತೆಗೆ ಎಷ್ಟು ಸಿಂಗರಿಸಿದರೇನು? ಸ್ವರೂಪವು ಮುಚ್ಚಬಲ್ಲದೇ? ಏನಿವಳ ಜರತಾರಿ, ಏನು ವಯ್ಯಾರ! ಮಗಳ ಬಲಿದಾನಮಾಡಿ ಏನೇನು ಮಾಡಿಕೊಳ್ಳುವದದೆಯೋ ಅದನ್ನು ಈಗಲೇ ಎಲ್ಲ ಮುಗಿಸಿ ಬಿಡು. ಇಲ್ಲದಿದ್ದರೆ ನಾಳೆ ಬೆಳಿಗ್ಗೆ ವಿನಾಯಕರಾಯರು ಇಹಲೋಕಕ್ಕೆ 'ರಾಮ ರಾಮ' ಹೊಡೆದು ಬಿಟ್ಟರೆ ಮುಂದೆ ಅವರ ಹೆಸರಿನಿಂದ ಪಂಚಾಕ್ಷರೀ ಜಪಿಸುತ್ತ ಕುಳಿತುಕೊಳ್ಳಬೇಕಾದೀತು. ಮುದುಕೀ, ನಿನ್ನ ಮುರುಕದ ಬೆಡಗಿನಲ್ಲಿ ನಿನ್ನ ಮಗಳ ಬಾಡಿದ ಮುಖವನ್ನು ನೀನು ನೋಡಿರಲಿಕ್ಕಿಲ್ಲ. (ಪ್ರಕಾಶ) ಆಗಲಿ. ನಡೆಯಿರಿ ಹೋಗೋಣ.

---

## ಪ್ರವೇಶ — ೨

ಮಂದಿರ—ಕಮಲಾವತಿಯು ಬರುವಳು.

ಕಮಲಾವತಿ ಪದ—ಪ್ರೇಮ ನಚ ಜಾಯಿ ಎಂಬಂತೆ.

ದೀನಜನಪಾಲ ಸಕಲಕಲಾ ವಿಶಾಲ ಪೊರೆ ಶ್ರೀಲೋಲ ||
ಪತಿಯನುರೂಪನಿರೆ ಸ್ತ್ರೀಯರ ಸಂ| ಸೃತಿರಥ ಸಾರಸೌಖ್ಯಗೇಹವಾಗುವದು||೧||

ವಸಂತ(ಲಗ್ನಪತ್ರವನ್ನು ಮುಂದೆ ಹಿಡಿದು)—ಕಮಲಾವತೀ ಇದೇನು?

ಕಮಲಾ— ಇದು ನನ್ನ ವಿವಾಹದ ಆಮಂತ್ರಣ ಪತ್ರಿಕೆಯು.

ವಸಂತ—ಹಾಗಾದರೆ ನನಗೆ ಕೊಟ್ಟ ವಚನದ ಗತಿಯೇನು?

ಕಮಲಾ—ಅದಕ್ಕೀಗ ಯಾವ ಉಪಾಯವೂ ಉಳಿದಿಲ್ಲ.

ವಸಂತ—ನಾಲ್ಕು ದಿವಸಗಳ ಪೂರ್ವದಲ್ಲಿ ಮೃತಪ್ರಾಯವಾದ ನನ್ನ ದೇಹಕ್ಕೆ ಸಂಜೀವನ ಮಾತ್ರೆಯನ್ನು ಕೊಟ್ಟ, ನನ್ನನ್ನು ಕರ್ತವ್ಯದಲ್ಲಿ ಉತ್ತೇಜನಗೊಳಿಸಿ ಭಾವೀ ಸುಖದ ಸಂಪೂರ್ಣ ನಂಬುಗೆಯನ್ನುಂಟು ಮಾಡಿದ ನನ್ನ ಪ್ರಣಯದೇವತೆಯ ಮುಖದಿಂದಲೇ ಈ ಶಬ್ದಗಳು ಹೊರಡುವವೇ? ಛೀ ಛೀ! ಕಮಲಾವತೀ ಇದ್ದ ಸಂಗತಿಯನ್ನು ಸ್ಪಷ್ಟವಾಗಿ ಹೇಳು. ಪ್ರತ್ಯಕ್ಷ ಆಕಾಶ

ಪ್ರಾಣಿಯಾದರೂ ನನ್ನ ಕಮಲೆಯು ವಚನಭ್ರಷ್ಟಳಾಗುವಳೆಂದು ಪ್ರಾಣಾಂತದಲ್ಲಿಯೂ ನಂಬುವದಿಲ್ಲ.

ಕಮಲಾ—ವಸಂತರಾವ, ನಾಲ್ಕು ದಿವಸಗಳ ಕೆಳಗೆ ನಿಮಗೆ ವಚನಕೊಟ್ಟದ್ದು ನಿಜ. ಅದನ್ನು ಪೂರ್ಣಮಾಡಬೇಕೆಂದು ಮನಸ್ಸಿನಲ್ಲಿ ನಿರ್ಧಾರಮಾಡಿದ್ದೂ ಸತ್ಯ! ಆದರೆ ಈ ಜಗತ್ತಿನ ಚಂಚಲ ಪ್ರಸಂಗಗಳು ಯಾವ ಮನುಷ್ಯನ ಕೈಯಿಂದ ಯಾವ ಹೊತ್ತಿಗೆ ಎಂಥ ಕೆಲಸಗಳನ್ನು ಮಾಡಿಸುತ್ತವೆಯೆಂಬದನ್ನು ಹೇಳಲಿಕ್ಕೆ ಬರುವದಿಲ್ಲ. ನನ್ನ ಪ್ರೇಮನಿರಾಶೆಯಿಂದ ನಿಮ್ಮ ಮನಸ್ಸು ಅತ್ಯಂತ ಖಿನ್ನವಾಗಿರುವದೆಂದು ನನಗೆ ಗೊತ್ತಾಗಿದೆ. ಆದರೆ ಈಗ ವಿವೇಕವನ್ನು ಎಚ್ಚರಿಸಿ ವಿಕಾರವನ್ನು ಹಿಂದೆಮಾಡಿದ ಹೊರತು ಗತ್ಯಂತರವೇ ಇಲ್ಲ.

ವಸಂತ--ಕಮಲೇ, ನೀನು ಮೇಲೆ ಮೇಲೆ ಎಷ್ಟೇ ಪ್ರತಾರಣಮಾಡಿದರೂ ನಿನ್ನ ಅಂತರಂಗದಲ್ಲಿ ನಡೆದಿರುವ ಕಳವಳವು ನನಗೆ ಸ್ಪಷ್ಟವಾಗಿ ಕಾಣುತ್ತದೆ. ನಾಲ್ಕು ದಿವಸಗಳ ಕೆಳಗೆ ವಿನಾಯಕರಾಯರ ವಿಷಯವಾಗಿ ತಿರಸ್ಕಾರವನ್ನು ತೋರಿಸಿದ ಕಮಲೆಯು, ಈಗ ಆ ಮುದಿಹದ್ದಿನ ಕೊರಳಿಗೆ ಸ್ವಸಂತೋಷದಿಂದ ಮಾಲೆಹಾಕುವಳೆಂಬದನ್ನು ಒಬ್ಬ ಬಾಲಕನು ಸಹ ನಂಬಲಿಕ್ಕಿಲ್ಲ! ಹೇಳು ಹೇಳು! ಇಂಥ ಕಟುಕರ್ತವ್ಯಕ್ಕೆ ನಿನ್ನನ್ನು ಬಲಾತ್ಕರಿಸಿದವರು ಯಾರು? ನಿನ್ನ ತಾಯಿಯು............

ಕಮಲಾ—ಇಲ್ಲ, ನನ್ನ ತಾಯಿಗೆ ಶ್ರೀಮಂತ ಅಳಿಯನಿರಬೇಕೆಂಬ ಆಶೆಯಿದ್ದರೂ ತನ್ನ ಮಗಳ ಮನಸ್ಸಿನ ವಿರುದ್ಧವಾಗಿ ಆಕೆಯು ಎಂದೂ ಆಚರಿಸಲಿಕ್ಕಿಲ್ಲ.

ವಸಂತ—ಹಾಗಾದರೆ ಈ ಕೆಲಸಕ್ಕೆ ನೀನಾಗಿಯೇ ಪ್ರಕೃತಳಾದಂತೆ ತೋರುತ್ತದೆ.

ಕಮಲಾ—ವಸಂತರಾವ, ನಾನು ಮಹಾಪರಾಧಿಯಿದ್ದೇನೆ. ನಿಮ್ಮ ವಿಶ್ವಾಸಘಾತಮಾಡಿದ್ದೇನೆ. ನಿಮ್ಮ ಪ್ರೇಮಕ್ಕೆ ವಂಚನೆಮಾಡಿರುತ್ತೇನೆ. ಆದರೂ ಪೂರ್ವಪ್ರೇಮವನ್ನು ನೆನೆಸಿ ನನ್ನ ಮೇಲೆ ದಯವಿಟ್ಟು ಒಮ್ಮೆ ತಮ್ಮ ವಚನದಿಂದ ನನ್ನನ್ನು ಮುಕ್ತಮಾಡಿರಿ.

ವಸಂತ—ದೈವವೇ, ನಾಲ್ಕು ದಿವಸಗಳ ಮೊದಲು ಯಾವಳ ಒಂದೇ ಒಂದು ಶಬ್ದದ ಮೇಲೆ ಭಾವೀಸುಖದ ಅರಮನೆಯನ್ನು ಕಟ್ಟಿದ್ದೆನೋ, ಯಾವಳನ್ನು ನನ್ನ ಹೃದಯ ಗದ್ದುಗೆಯ ಮೇಲೆ ಸ್ಥಾಪಿಸಿ ದೇವತೆಯೆಂದು ಆಪೋ

ಠಾತ್ರಿ ಚಿಂತನೆ ಮಾಡಿದೆನೋ, ಯಾವಳನ್ನು ನನ್ನ ದೇಹದ ನೆರಳೆಂದು ತಿಳಿದು ನಿರ್ಭಯನಾಗಿ ನನ್ನ ಜೀವನ ಮಾರ್ಗವನ್ನು ಹಿಡಿದಿದ್ದೆನೋ, ಆ ನನ್ನ ಕಮಲಾವತಿಯು—ನನ್ನ ಜೀವದ ಗೆಳತಿಯು—ನನ್ನ ಸೌಖ್ಯಮಂದಿರದ ತಳಹದಿಯು-ನನ್ನ ದೇಹದ ಚೈತನ್ಯ ಶಕ್ತಿಯು-ನನ್ನ ಕೊಲೆ ಮಾಡುವದೆಂದರೇನು?

ಪದ—ರಾಗ. ಮುಲ್ತಾನಿ.

ಸಹಿಸೆ ನಾ ತಾಪವ | ದಹಿಪುದು ಸರ್ವಾಂಗವು ||
ವಿರಹಜನಿತ ಶೂನ್ಯಾಂತರನಾಗೆ | ಪರಶ್ಯತಿ ಜರಗುವಹೇ || ೧ ||
ಮಾನವ ಯೋಗ್ಯ ಕಾರ್ಯವ ಗೈಯದೊಡೆ | ಹೀನತೆಪೊಂದುವೆನು ||೨||

ಕಮಲೇ, ನಾನು ಯಾವ ಮಹಾಪಾಪವನ್ನು ಮಾಡಿದ್ದೆನು, ಯಾರ ಪ್ರೇಮದಲ್ಲಿ ವಿಷವನ್ನು ಕಲಿಸಿದ್ದೆನು, ಯಾರ ವಿಶ್ವಾಸಘಾತಮಾಡಿದ್ದೆನು? ಹಾಗಿಲ್ಲದಿದ್ದರೆ ನನ್ನಮೇಲೆ ಇಂಥ ಭಯಂಕರ ಪ್ರತ್ಯಾಘಾತವಾಗಲಿಕ್ಕೆ ಕಾರಣವೇನು? ಹಾಗಾದರೆ ಕಮಲಾವತೀ, ನನ್ನ ಆಶಾಬಳ್ಳಿಯು ನಿನ್ನ ಪ್ರೇಮಜಲವಿಲ್ಲದೆ ಕಡೆಗೆ ಒಣಗೇ ಹೋಗುವದಲ್ಲವೇ?

ಕಮಲಾ—ವಸಂತರಾವ, ನಿಮ್ಮ ದೀನ ಸ್ಥಿತಿಯನ್ನು ನೋಡಲಾರೆನು. ಡಾಕ್ಟರಸಾಹೇಬ, ಎಷ್ಟೋ ದೇವರಿಗೆ ಹರಕೆಹೊತ್ತು ಅತಿ ಕಠಿಣವಾದ ವ್ರತ ನಿಯಮಗಳನ್ನುಮಾಡಿ ತಾಯಿಯು ಮಗನನ್ನು ಹಡೆದು ಕೌತುಕ ಪ್ರೇಮಗಳಿಂದ ಅವನನ್ನು ಬೆಳೆಸುತ್ತಾಳೆ. ಆ ಹುಡುಗನು ಬೆಳೆಬೆಳೆದಂತೆ ಅರಳುತ್ತಿರುವ ಕಮಲದ ಮೊಗ್ಗೆಯಂತೆ ನಗಹತ್ತಿದಂತೆ, ತೊದಲ್ನುಡಿಯಿಂದ ತಾಯಿಯ ಆನಂದಕ್ಕೆ ಪಾರಾವಾರವೇ ಉಳಿಯುವದಿಲ್ಲ. ಆಕೆಯ ಹರ್ಷವನ್ನು ಹಿಡಿಸಲಿಕ್ಕೆ ಆಕಾಶವು ಸಹ ಸಾಕಾಗುವದಿಲ್ಲ; ಆದರೆ ವಸಂತರಾವ, ಭವಿತವ್ಯತೆಯ ವಾಯುಚಕ್ರದಲ್ಲಿ ಸಿಲುಕಿ ಆ ಕೋಮಲ ಪುಷ್ಪವು, ಆ ಆನಂದಕಂದನು ತಾಯಿಯ ಕೈ ಬಿಟ್ಟು ಹೋದಾಗ ಅವಳ ದುಃಖಧ್ವನಿಯು ಬ್ರಹ್ಮಾಂಡವನ್ನೆಲ್ಲ ತುಂಬಿಬಿಡುವದು! ರಾಯರೇ, ಇಂಥ ಭಯಂಕರವಾದ ಭವಿತವ್ಯತೆಯ ಚಕ್ರದಲ್ಲಿ ಕಲಿಕಾಲವೇ ಸಿಕ್ಕು ಒದ್ದಾಡುತ್ತಿರುವಾಗ ನಮ್ಮ ಪ್ರೇಮವು ಅದರಿಂದ ಹೇಗೆ ಪಾರಾಗುವದು?

ವಸಂತ—ಕಮಲೇ, ನಮ್ಮ ಪ್ರೇಮತಂತುಗಳನ್ನು ಕತ್ತರಿಸಿದ ಆ ಭವಿತವ್ಯತೆಯ ಕತ್ತರಿಯಾದರೂ ಯಾವದು? ದಯಮಾಡಿ ತಿಳಿಸಿದರೆ, ಆಮೇಲೆ ನನ್ನ ದೈವಿದ್ದಂತೆ, ನಾನಿದ್ದೇನೆ.

ಕಮಲಾ—ವಸಂತರಾವ, ಭವಿತವ್ಯತೆಯ ಈ ವಿಷಮ ಪ್ರಸಂಗಗಳು

ಮೇಲಿಂದಮೇಲೆ ಆಯುಷ್ಯದ ಪರಿವರ್ತನೆಯನ್ನು ಮಾಡುತ್ತಿವೆಯೆಂದೇ ಜಗತ್ತಿಗೆ ಇಂಥ ವೈಚಿತ್ರ್ಯವು ಬಂದಿದೆ. ನನ್ನ ಮೇಲೆ ತಮ್ಮ ವಿಶ್ವಾಸವಿದೆಯಲ್ಲವೇ? ಹಾಗಿದ್ದರೆ ನಾನು ಹೇಳಿದಂತೆ ಮಾಡಿರಿ. ಒಂದು ಕಾಲದಲ್ಲಿ ನೀವು ಒಬ್ಬ ಚಂಚಲ ತರುಣಿಯ ಮೇಲೆ ಪ್ರೇಮ ಮಾಡಿದಿರೆಂಬ ವಿಷಯವನ್ನು ಮನಸ್ಸಿನಿಂದ ಕಿತ್ತು ಹಾಕಿ ಬಿಡಿರಿ; ಆಕೆಯ ಪ್ರೇಮದಿಂದ ತುಂಬಿದ ನಿಮ್ಮ ಹೃದಯದ ಮೇಲೆ ಆಕೆಯ ಬಗ್ಗೆ ಉಂಟಾದ ತಿರಸ್ಕಾರದ ಹೊದಿಕೆಯನ್ನು ಹಾಕಿರಿ. ಎಂದರೆ, ಯಾವ ಪ್ರೇಮಭಂಗದ ಸಲುವಾಗಿ ನಿಮ್ಮ ಅಂತಃಕರಣವು ಕಳವಳಿಸುತ್ತಿರುವದೋ, ಮನಸ್ಸು ತಳಮಳಿಸುತ್ತಿರುವದೋ, ದೃಷ್ಟಿಯು ಶೂನ್ಯವಾಗಿರುವದೋ................

ವಸಂತ—ಕಮಲಾವತೀ, ನೀನು ನನಗೇನು ಹೇಳುತ್ತಿರುವೆ? ಪ್ರೇಮದ ಭಾರವನ್ನು ಇಷ್ಟು ಸುಲಭವಾಗಿ ಹಾರಿಸಿ ಒಗೆಯುವಂತಿದ್ದರೆ ಜಗತ್ತಿನಲ್ಲಿ ಅದಕ್ಕೆ ಒಡಕ ಕವಡೆಯ ಬೆಲೆಯು ಸಹ ಇರುತ್ತಿದ್ದಿಲ್ಲ; ಸಾಧ್ವೀಸ್ತ್ರೀಯರ ಚರಿತ್ರಗಳು ಕೇಳಲಿಕ್ಕೆ ಸಿಗುತ್ತಿದ್ದಿಲ್ಲ; ಮಾತೃಭೂಮಿಯನ್ನುದ್ಧರಿಸುವ ನರವೀರರನ್ನು ಕಲ್ಪನೆಯಲ್ಲಿಯೂ ಕಾಣುತ್ತಿದ್ದಿಲ್ಲ! ಕಮಲೇ, ಪ್ರೇಮವನ್ನು ಮರೆಯುವದು ಇಷ್ಟು ಸುಲಭವೆಂದು ತಿಳಿಯಬೇಡ.

ಕಮಲಾ—ಹಾಗಾದರೆ ಶುದ್ಧಪ್ರೇಮಕ್ಕೆ ಚಂಚಲವಿಕಾರಗಳ ಸಂಬಂಧವಾಗುವದಾದರೂ ಹೇಗೆ? ಈ ಪ್ರೇಮವು ನಿರ್ವಿಕಾರ, ನಿರ್ವಿಕಲ್ಪ, ಅನಂತವಾಗಿದೆ! ಯಾರು ಈ ಪ್ರೇಮರೂಪ ಪರಮಾತ್ಮನ ಕಡೆಗೆ ಮನಸ್ಸನ್ನು ಹಚ್ಚಿರುವರೋ ಅವರ ವಾಣಿಯಲ್ಲಿ ಅಮೃತವದೆ; ದೃಷ್ಟಿಯಲ್ಲಿ ಭೂತದಯೆಯುದೆ; ವೃತ್ತಿಯಲ್ಲಿ ವಿಶ್ವಬಂಧುತ್ವವದೆ. ವಸಂತರಾವ ಈ ದಿವ್ಯ ಪ್ರೇಮಕ್ಕಾಗಿ ಇಲ್ಲಿಯವರೆಗೆ ಎಷ್ಟು ಜನ ಮಹಾತ್ಮರು ಸ್ವಾರ್ಥತ್ಯಾಗ ಮಾಡಿಲ್ಲ? ಕುರುಪುಂಗವ ಭೀಷ್ಮನು ಪಿತೃಋಣಕ್ಕಾಗಿ................

ವಸಂತ—ಹಾಗಾದರೆ ನೀನು ಯಾವ ಋಣವನ್ನು ತೀರಿಸುವದಕ್ಕಾಗಿ ನನಗೆ ಈ ಸ್ವಾರ್ಥತ್ಯಾಗದ ಮಾರ್ಗವನ್ನು ತೋರಿಸುತ್ತಿರುವೆ?

ಕಮಲಾ—ಒಬ್ಬ ಹತಭಾಗ್ಯ ಕುಮಾರಿಕೆಯ ಕರ್ತವ್ಯಕ್ಕಾಗಿ!

ವಸಂತ—ಛೇ, ನಿನ್ನ ಈ ಸಂದಿಗ್ಧ ಭಾಷಣದಿಂದ ನಿಶ್ಚಯವಾಗಿಯೂ ನನಗೆ ಹುಚ್ಚು ಹಿಡಿಯುವದು. ಕಮಲಾವತೀ, ನಾಲ್ಕು ದಿವಸಗಳ ಕೆಳಗೆ ನನ್ನ ಹೃದಯವಲ್ಲರಿಗೆ ಪ್ರೇಮಜಲ ಸೇಚನೆಮಾಡಿ ಅಂತಃಸ್ಫೂರ್ತಿಯನ್ನುಂಟುಮಾ

ಡುವ ನಿನ್ನ ಆ ಮನಸ್ಸಿನ ಕೋಮಲತೆಯು ಎಲ್ಲಡಗಿತು? ಹೃದಯವೀಣೆಯ ತಂತಿಗಳು ಹೇಗೆ ಅಪಸ್ವರವನ್ನು ನುಡಿಯುವವು? ಕಮಲೇ, ನನ್ನ ಆಶಾಭಂಗ ವನ್ನು ಮಾಡಿ ವಿನಾಯಕರಾಯರ ಕೊರಳಿಗೆ ಮಾಲೆಯನ್ನು ಹಾಕಲಿಕ್ಕೆ ಕಾರಣ ವೇನೆಂಬದನ್ನು ನಿನ್ನ ಮುಖದಿಂದ ತಿಳಕೊಳ್ಳಲಿಕ್ಕೆ ಸಹ ನಾನು ಅಪಾತ್ರನಾದೆ ನಲ್ಲವೇ?

ಕಮಲಾ—ವಸಂತರಾವ, ಸುಮ್ಮನೆ ತರ್ಕವಿತರ್ಕಮಾಡಿ ಮನಸ್ಸಿಗೇಕೆ ಸಂತಾಪ ಮಾಡಿಕೊಳ್ಳುತ್ತೀರಿ? ನಾನಾಗಿಯೇ ಈ ಲಗ್ನಕ್ಕೆ ಒಪ್ಪಿಗೆಯನ್ನು ಕೊಟ್ಟಿದ್ದೇನೆ.

ವಸಂತ—ಎಂದೂ ಶಕ್ಯವಿಲ್ಲ. ನೀನು ಎಷ್ಟು ಕಣ್ಣುಮುಚ್ಚಾಣಿಕೆಮಾಡಿ ದರೂ ನಿನ್ನ ಹೃದಯದ ಸಂದೇಶವು ನನ್ನ ಹೃದಯಕ್ಕೆ ತಿಳಿಯದೆ ಇಲ್ಲ.

ಕಮಲಾ—ಹಾಗಾದರೆ ಸುಮ್ಮನಾಗುವದಿಲ್ಲವೇಕೆ? ವಸಂತರಾವ, ನನ್ನ ಮಾತೃಋಣವನ್ನು ತೀರಿಸುವದಕ್ಕಾಗಿ ನನ್ನ ಪ್ರೇಮಪ್ರವಾಹಕ್ಕೆ ಒಡ್ಡುಹಾಕಿ ಮತ್ತೊಂದುಕಡೆ ತಿರುಗಿಸಬೇಕಾಯಿತು. ನಿಮ್ಮ ಚರಣದಲ್ಲಿ ಮನಸನ್ನಿರಿಸಿದೆನು, ವಚನ ಕೊಟ್ಟೆನು, ಬಹಳವೇನು? ನಿಮ್ಮ ನೆರಳಿನಂತೆ ಸಹಧರ್ಮಚಾರಿಣಿಯಾಗಿ ಸಂಸಾರದಲ್ಲಿ ಸಹಾಯಮಾಡಿ ದೇಶೋದ್ಧಾರಮಾಡಬೇಕೆಂದು ಬಹಳ ಆಶೆಯನ್ನು ಹಿಡಿದಿದ್ದೆನು; ಆದರೆ ದುರ್ದೈವವು ಭವಿತವ್ಯತೆಯ ಶೂಲದಮೇಲೆ ನಮ್ಮ ಪ್ರೇಮ ವನ್ನು ಶೂಲಕ್ಕೆ ಹಾಕಿಬಿಟ್ಟಿತು! ಈ ಜನ್ಮದಲ್ಲಿ ನಮ್ಮಿಬ್ಬರ ಸಂಬಂಧವಾಗದಿ ದ್ದರೂ ಈ ಲೋಕದ ಕಾರ್ಯವನ್ನು ಮುಗಿಸಿ ಪರಲೋಕದ ಸಮುತ್ಪದಲ್ಲಿ ಇಬ್ಬ ರೂ ಕಾಲಿಟ್ಟಾಗ ಈ ಕಮಲಾವತಿಯು ತಮ್ಮವಳೇ.

ವಸಂತ—ಕಮಲೇ, ಎಂಥ ಭಯಂಕರ ಆತ್ಮಸಂಯಮನವಿದು?

ಕಮಲಾ—ಭಯಂಕರವಾಗಿರುವದೆಂದೇ ಪರಿಣಾಮವು ದಿವ್ಯವಾಗಿದೆ! ಡಾಕ್ಟರ, ನಿಮ್ಮಲ್ಲಿ ಇನ್ನೂ ನಿರ್ಮಲಪ್ರೇಮವು ಹುಟ್ಟಿಲ್ಲ. ಕಮಲೆಯ ಈ ಮೂರೂವರೆ ಮೊಳದ ದೇಹದಮೇಲೆಯೇ ನಿಮ್ಮ ಶಾರೀರಿಕ ಪ್ರೇಮವಿದೆ. ನಿಜ ವಾಗಿ ನನ್ನ ಗುಣಗಳ ಮೇಲೆ ಪ್ರೇಮವಿದ್ದರೆ, ಈಗಲೂ ಅದೇ ಕಮಲೆಯು ದೂರ ವಾದದ್ದಕ್ಕಾಗಿ ವಿಷಾದವೇಕೆ? ಈಗ ಆತ್ಮಹತ್ಯೆ ಮಾಡಿಕೊಂಡು ಈ ಯಾತ್ರೆ ಯನ್ನು ಮುಗಿಸಲಿಕ್ಕೆ ಬರುತ್ತದೆ; ಆದರೆ ಅದರಲ್ಲಿ ನನ್ನ ಸ್ವಾರ್ಥವನ್ನಷ್ಟೇ ನೋಡಿಕೊಂಡಂತಾಗುವದು. ನನ್ನ ಈ ದುರ್ದಶೆಯನ್ನು ನೋಡಿ ಆ ಇನ್ನುಳಿದ ತಾಯಿ-ತಂದೆಗಳಿಗೆ ಇಂಥ ಮುದುಕರಿಗೆ ಹಣದಾಸೆಗಾಗಿ ಮಕ್ಕಳನ್ನು ಕೊಡುವ

ದುರಾಶೆಯು ದೂರಾದೀತೆಂಬ ಆಶೆಯಿಂದ ಜೀವಹಿಡಿದಿದ್ದೇನೆ. ವಸಂತರಾವ, ಪ್ರೇಮದ ನಿಜವಾದ ಕರ್ತವ್ಯವೆಂದರೆ ದೇಶಸೇವೆಯು! ನನ್ನ ಮೇಲಿನ ಪ್ರೇಮವನ್ನೇ ಬೆಳಿಸಿ ದೇಶದ ಉದ್ಧಾರಕ್ಕಾಗಿ ಪ್ರಯತ್ನಿಸಿರಿ. ಇನ್ನು ನನ್ನ ನೆನಪನ್ನು ಬಿಟ್ಟು ಅನುರೂಪ ಕುಮಾರಿಕೆಯೊಡನೆ ಲಗ್ನವಾಗಿ ಸುಖದಿಂದಿರ್ರಿ. ತಮ್ಮ ವಚನ ಭಂಗ ಮಾಡಿದ್ದಕ್ಕಾಗಿ ಕ್ಷಮೆಯಿರಲಿ. (ಅಳುತ್ತ ಹೋಗಹತ್ತುವಳು)

ವಸಂತ—ಕಮಲೇ, ನಿಲ್ಲು ನಿನ್ನ ಇಚ್ಛೆಯ ವಿರುದ್ಧವಾಗಿ ಈ ಲಗ್ನದ ರಹಸ್ಯವನ್ನು ಕೇಳುವದಿಲ್ಲ. ನಿನಗೆ ಯಾವ ರೀತಿಯಿಂದಲೂ ದೋಷಕೊಡುವದಿಲ್ಲ. ಭೀಷ್ಮಪ್ರತಿಜ್ಞೆಯ ಕಾಲವು ಹಿಂದಾಗಿ ಹೋಯಿತು. ಈಗಲೂ ಭರತಖಂಡದಲ್ಲಿ ಅಲೌಕಿಕ ಆತ್ಮಯಜ್ಞಮಾಡುವ ಸಾವಿರಾರು ತರುಣರಿರುವರೆಂದು ತೋರಿಸುವದಕ್ಕಾಗಿ ಅವಿವಾಹಿತನಾಗಿ ದೇಶಸೇವೆಗೆ ಸಿದ್ಧನಾಗುತ್ತೇನೆ. ಆದರೆ ಕಮಲಾವತೀ, ಮುಂದೆ ಒಮ್ಮೆಲ್ಲೊಮ್ಮೆ ನಮ್ಮಿಬ್ಬರ ದರ್ಶನವಾಗುವ ಪ್ರಸಂಗ ಬಂದರೆ ಇಬ್ಬರ ಮನಸ್ಸೂ ನಿರ್ವಿಕಾರವಾಗಿರಲೆಂದೇ ಪ್ರಭುವಿನ ಬಳಿಯಲ್ಲಿ ಬೇಡಿಕೊಳ್ಳುವಾ ಬಾ!

ಪದ—(ಇಬ್ಬರೂ) ದಯಾಸಿಂಧೆ ಮಾಧವಾ, ಎಂಬಂತೆ

ದಯಾಘನ ಮೋಹನ ಗೋಪೀಜನಾವನ ಸುಖಾಸನ |
ದೀನ ಭಜಕಜನ ದಯಾಲ ಗಾನಲೋಲ ಪ್ರೇಮಲ ||
ಬೇಡುವೆವೈ ತವಪಾದದೊಳು | ನೀಡು ಸುಮತಿಯ
ನಾವಗಂ ಪೊರೆ ವಿನಾಶದಿಂ || ೧ ||

---

## ೩ನೆಯ ಪ್ರವೇಶ.

(ಸ್ಥಳ—ವಿವಾಹ ಮಂಟಪ, ಸೋಡಾದ ಅಂಗಡಿ, ಚಹಾದ ಅಂಗಡಿ, ಬೀಡಿ-ಸಿಗರೇಟು ಬ್ರ್ಯಾಂಡಿ ಅಂಗಡಿಗಳು. ಖುರ್ಚಿಯಮೇಲೆ ಮಿ. ಎನ್. ಸಾಹೇಬ, ಅಶ್ವಿನೀ ಕುಮಾರ ಬಂಗಾಲಿ, ಲಂಬೋದರಪಂತ ಮರಾಠೀ, ಜಗನ್ನಾಥರಾವ ಕನ್ನಡ, ಲಕ್ಷ್ಮಣನಾಯಿಕ ಸಾರಸ್ವತ, ಕೋದಂಡರಾಮ ಚೆಟ್ಟಿ ತೆಲಗು, ಗೋಸ್ವಾಮಿ ಹಿಂದೀ, ವಿಶ್ವಾಸರಾವ ಇವರೆಲ್ಲರೂ ಒಬ್ಬೊಬ್ಬರಾಗಿ ಕುಳಿತುಕೊಳ್ಳುವರು. ಲೇಡಿ ವಗೈರೆ ಜನರು ಬರುವರು.)

ಭಟ್ಟರು (ಬರುವರು)—ಹು! ಹು! ಹೊತ್ತು ಮೀರುತ್ತದೆ ಕರೆಯಿರಿ. ವಧೂವರರನ್ನು. (ನೋಡಿ) ಅಯ್ಯೋಯಪ್ಪಾ, ಇದೇನು ಕಂಡವ್ವ ಚಂಡಾಲ

ಸಹಸ್ರನಾಮಾವಳಿ! ಈ ಶೂದ್ರರೆದುರಿಗೆ ನಮ್ಮ ವೇದಮಂತ್ರಗಳನ್ನು ಹೇಳು ವದು ಬಹಳ ಕಠಿಣಬಂತು! ತಿರುಗಿ ಹೋಗಬೇಕೆಂದರೆ ದಕ್ಷಿಣೆಯ ಆಶೆ ಯೊಂದು. ಹುಡುಗರು ಹುಪ್ಪಡಿ ಸಹಿತ ಕರಕೊಂಡು ಬಂದಿದ್ದೇನೆ. ಇಲ್ಲಿಯಂತೂ ಎಲ್ಲರೂ ಸಂಸ್ಕೃತದ ವೈರಿಗಳೇ ಕಾಣಿಸುತ್ತಾರೆ. ಈ ಗೊಂದಲದಲ್ಲಿ ಶಬ್ದವಾ ದರೂ ಯಾರಿಗೆ ಕೇಳುತ್ತದೆ? ಏನಾದರೊಂದು ಹೇಳಿಬಿಟ್ಟರಾಯಿತು. ಹಾಹಾ! ಕರೆಯಿರಿ ವಧುವೆಲ್ಲಿ? (ರಮಾಬಾಯಿಯು ಒಳ್ಳೇ ಐಟಿನಿಂದ ಬರುವಳು.)

ಭಟ್ಟರು—ಹಾ ಕನ್ಯೆಯು ಬಂದಳು! ಹು! ಸುರುವಾಗಲಿ!

ಎಲ್ಲರೂ—ಓಲ್ಲೋ ವೆಲ್‌ಕಂ ಟು ದಿ ಬ್ರಾಯಿಡ ಕಮಲಾವತಿ (ಎಂದು ಏಳುವರು)

ವಿಶ್ವಾಸ—ಓ ನೋ! ಸಿ ಈಜ ದಿ ಮದರ ಆಫ್ ದಿ ಬ್ರಾಯಿಡ.

ಎಲ್ಲರೂ—ಈಜ ಇಟ್ ಸೋ (ಎಂದು ನಗುವರು)

ಭಟಜಿ—ಕರೆಯಿರಿ ಬೇಗನೆ ವಿನಾಯಕರಾಯರನ್ನು! (ವಿನಾಯಕರಾ ಯರು ಬೂಟು ಕಾಲಚೀಲ ಹ್ಯಾಟ್ ಪ್ಯಾಂಟ ಸಹಿತ ಬರುವರು) ಛೀ ಛೀ ರಾಯರೇ, ಇವನ್ನೆಲ್ಲ ತೆಗೆದು ಮಡಿಯುನ್ನುಟ್ಟುಕೊಂಡು ಬರ್ರಿ.

ವಿನಾಯಕ—ಇಲ್ಲದ ತಲೆಹರಟೆ ಬೇಡ. ಹೀಗೇ ಮುಗಿಸಿ ಬಿಡು.

ಭಟ್ಟ—ಹಾಗಲ್ಲ ರಾಯರೇ ಸ್ವಲ್ಪ ಬದಲಿಸಿಕೊಂಡು ಬರ್ರಿ.

ಲಂಬೋದರ—ಚಾ-ಚಾ. ಆಂತ ಜಾವೂನ ಜರಾಸಾ ಫೇರಫಾರ ಕರೂನ ಯಾ (ವಿನಾಯಕ ಒಳಗೆ ಹೋಗುವನು)

ವಿಶ್ವಾಸ—(ಜನಾಂತಿಕಂ) ನೋಡಿದಿರಾ, ಇವರ ಸುಧಾರಣೆಯನ್ನು! ವಿನಾಯಕರಾಯರು ಜಾತಿಯಿಂದ ಬ್ರಾಹ್ಮಣರು. ಇಲ್ಲಿಯವರೆಗೆ ಮೂರುಲಗ್ನ ಗಳನ್ನು ಮಾಡಿಕೊಂಡಿದ್ದಾರೆ. ಆದರೆ ಸಾಹೇಬಜನರ ಪರಿಚಯವಾಗಿ ರಾವಬ ಹಾದ್ದೂರ ಪದವಿಯು ಬಂದ ಕೂಡಲೆ ತಾವು ಹಿಂದುಗಳೆಂಬದನ್ನು ಮರೆತು ಪ್ಯಾಂಟು ಬೂಟುಗಳನ್ನು ಹಾಕಿಕೊಂಡು ಲಗ್ನಮಂಟಪಕ್ಕೆ ಬಂದಿರುವರು. ಮಂಟಪದಲ್ಲಂತೂ ಸಾಹೇಬಜನರಿಗೇ ಅಗ್ರಸ್ಥಾನ! ಇವರಾಗಿಯೇ ತಮ್ಮ ತಮ್ಮ ಧರ್ಮಗಳಿಗೆ ಅರದಾಳ ಹಚ್ಚಲಿಕ್ಕೆ ಹತ್ತಿದರೆ ಸಾಹೇಬ ಜನರಿಗಂತೂ ತೂಗಡಿಸಿದವರಿಗೆ ಹಾಸಿಕೊಟ್ಟು ಬೆನ್ನು ತಟ್ಟಿದಂತಾಗುವದು. ಈ ಮುದುಕನ ಲಗ್ನದ ಉತ್ಸುಕತೆಯನ್ನು ನೋಡಿದಿರಾ? ಇಡೀ ಹಿಂದುಸ್ತಾನದ ತುಂಬೆಲ್ಲ ಲಗ್ನ ಪತ್ರಿಕೆಗಳನ್ನು ಕಳಿಸಿರುವನು. ತರುಣರು ಸಹ ಇಷ್ಟು ಉತ್ಸುಕತೆಯನ್ನು

ತೋರಿಸಿರಲಿಕ್ಕಿಲ್ಲ. ಸಾಲದ್ದಕ್ಕೆ ಇಲ್ಲಿಯೇ ಜುಟ್ಯಾ, ಚಹಾ, ಸೋಡಾ ಮತ್ತು ಆ ಮಹಾಮಾರಿ ಸುರಾದೇವಿ, ಅಂತು ಲಗ್ನವೆಲ್ಲ ಒಳ್ಳೇ ಹೊಸಪದ್ಧತಿಯದು. ಪಾಪ ಭಡಜಿಗಂತೂ ಇವರೆಲ್ಲರನ್ನು ನೋಡಿ ನೆತ್ತಿಯಿಂದಲೇ ಜೀವ ಹೋಗಿದೆ. ಈ ರಮಾಬಾಯಿಗಂತೂ ನಾಚಿಕೆಯೇ ಇಲ್ಲ. ಕುಳಿತರೂ ಈಕೆಯ ಮುಸುಕ ವಿನ್ನೂ ಮುಗಿದಿಲ್ಲ. ಆಗಲಿ ವಿನೇನು ನಡೆಯುವದೋ ನೋಡೋಣ.

ಭಟಜಿ—ಹಾ! ರಾಯರನ್ನು ಕರೆಯಿರಿ. ಅರಿಸಿನ, ಕುಂಕುಮ, ಅಕ್ಷತೆಗಳು ಎಲ್ಲಿವೆ? ಹಾ! ಉಲುಪಿ.

ವಿಶ್ವಾಸ—(ಭಟಜಿಗೆ) ಇಲ್ಲಿ ಉಲುಪಿಯಿರಕ್ಕಲಿಕ್ಕೆ ಇದೇನು ನಾಗಲೋಕವಲ್ಲ. ಬೇಕಾದರೆ ಆ ಖುರ್ಚಿಯ ಮೇಲೆ ಚಿತ್ರಾಂಗದೆಯಿರುವಳು ನೋಡು.

ಭಟಜಿ—ಹಾ ಹಾ! ವಧುವನ್ನು ಕರೆಯಿರಿ. ಹು! ಗಂಟಿ, ಘೂಪಾರತಿ, ಹೂ ವರನೆಲ್ಲಿ? ಹಾ! ಮಂಗಲಸೂತ್ರ, ಏ ಅಂತ್ಯಾ ಬಾ ಇಲ್ಲಿ ಹತ್ರ. ಗದ್ದಲದಾಗ ತಪ್ಪಿಸಿಕೊಂಡೇ ರಂಡೇಗಂಡಾ. ಏ ರಂಡೇ ಸರಿ ಮುಟ್ಟಿಗಿಟ್ಟೀ(ಗಡಬಡಿಮಾಡುವನು) (ವಿನಾಯಕರಾಯರು ಬರುವರು)ಹು ಕರೆಯಿರಿ ವಧುವನ್ನು.(ಕಮಲಾವತಿಯು ಬಾಡಿದ ಮುಖದಿಂದ ಸಾದಾವೇಷದಲ್ಲಿ ಬರುವಳು) ಹಾ! ನಿಲ್ಲಿರಿ ನಿಲ್ಲಿರಿ; ಸುಮುಹೂರ್ತೇ ಸಾವಧಾನೇ! ಹಾ ಅಕ್ಕಿಕಾಳು ಹಿಡಿಯಿರಿ! ಹಾ! ಮಂಗಲಸೂತ್ರ (ರಮಾಬಾಯಿಯು ಕೊರಳಿಗೆ ಕಟ್ಟಹೋಗುವನು.) ಪ್ಪೋ ಪ್ಪೋ ಮರೆತಿದ್ದೆ! ಹಿಡಿಯಿರಿ ರಾಯರೇ ತಂಗೀ ಹಿಡಿ ಮಾಲೆಯನ್ನು (ಗಂಟಿಬಾರಿ ಸುತ್ತ) ಹು ಹು! ಸುಮುಹೂರ್ತೇ ಸಾವಧಾನೆ....ಎತ್ತಣ ತುರಂಗವಿದು ಪ್ರೊಕ್ಕು ಪುದೋಟಮಂ ತೊತ್ತುಳದುಳಿಪುದು. ಸುಲಗ್ನ ಸಾವಧಾನ, ಸಲ್ಮೀಕಿ ಮುಸ್ನಾಥನೇ ಪ್ರೋತ್ಸು ಮಾಪ್ಯವುದೆಂದೆಸಿಗೆ ಸೇಮಿಸಿ.

ವಿಶ್ವಾಸ—ಕೇಳಿರಿ ಇವರ ಲಗ್ನಮಂತ್ರಗಳನ್ನು ಇಂಥ ಲಗ್ನಕ್ಕೆ ಇಂಥ ಮಂತ್ರಗಳೇ ಬೇಕು.

ಭಟಜಿ—ಹಾ ಹಾ! ಎಲ್ಲರೂ ಅಕ್ಕಿಕಾಳು ಹಿಡಿಯರಿ. ಸುಮುಹೂರ್ತೇ ಸಾವಧಾನೇ ಸುಲಗ್ನಸಾವಧಾನೇ ತದೇವಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂತದೇವಾ......ಹು! ಒಗೆಯಿರಿ ಅಕ್ಕಿಕಾಳು (ಎಲ್ಲರೂ ಒಗೆಯುವರು. ಕಮಲೆಯು ಕಣ್ಣೀರು ಸುರಿಸುತ್ತ ಮಾಲೆಯನ್ನು ಹಾಕುವಳು.) ಚಪ್ಪಳೆಯಾಗುವದು. (ಭಟಜಿ ಎಲ್ಲ ಸಾಮಾನು ಕಟ್ಟಿಕೊಂಡು ಹೊರಡುವನು. ಅತ್ತರ ಗುಲಾಬ ವಗೈರೆ ನಡೆಯುವದು)

ಪಿಗ್‌ಸಾಹೇಬರು—(ಎದ್ದು ನಿಂತು) ರಾವಬಹಾದ್ದೂರ ವಿನಾಯಕ ರಾವ ನಾವು ನಿಮಗೆ ನನ್ನ ಮನಸ್ಸುಪೂರಕವಾಗಿ ಕಂಗ್ರ್ಯಾಚ್ಯುಲೇಶನ್ಸಗಳನ್ನು ಮುಟ್ಟಿಸುತ್ತೇನೆ. ನಿಮ್ಮ ಹಿಂದುಗಳಲ್ಲಿ ಐವಟ್ಟು ವರಸದ ಹುಡುಗನು ಮದುವೆ ಮಾಡಿಕೊಂಡರೆ ಜನರು ನಿಮ್ಮ ನಿಂದಾಮಾಡುಟ್ಟಾರೆ. ಆದರೆ ನಮ್ಮಲ್ಲಿ ಸಟ್ಟಿನ್ನಿ ಐವಟ್ಟು ವರ್ಷಕ್ಕೆ ಸಂಸಾರಕ್ಕೆ ಸುರುವಾಗುತ್ತದೆ. ಮಿಸ್ ಕಮಲಾವತಿ ನಿನಗೆ ನಾನು ಥ್ಯಾಂಕ್ಸ ಕೊಡುತ್ತೇನೆ (ಚಪ್ಪಾಳೆ)

ಕೋದಂಡರಾಮು—ಹಿಅರ ಹಿಅರ.

ಅಶ್ವಿನೀಕುಮಾರ—ಮಾರಾ ಬಾಬಾ, ಅಮಾರಾ ಹಿಂದುಸ್ತಾನಮಾ ಅಂಗ್ರೇಜಿಲೋಕನೀ ಜೇವಿ ಹಿಮ್ಮತನುಥೀ, ಚಾಲರೀತ ನಥೀ, ಆ ಲೋಕಾನೀ ಜೇವೀ ಕೇಳವಣೀ ನಥೀ, ಮಾಣಸ ಜ್ಯಾರೆ ಪಚಾಸ ಬರಸನೋ ಥಾಯಛೇ, ತ್ಯಾರೇಜ ತೇನಾ ಮಗಜಮಾ ಅಕ್ಕಲನಾ ಗುಲಾಬ ಫುಲಿಯಾ ಕೇರೆಛೇ. ಪಂಧರ ಬರಸನಾ ಛೋಕರೀನೆ ಪಚಾಸಬರಸನಾ ಛೋಕರಾಸಾಥೇ ಪರಣ ವಾನೋ ಜ್ಯಾರೇ ಅಮಾರು ಹಿಂದುಸ್ತಾನಮಾ ಧೂಮಧಡಾಕೊ ಚಾಲೂಥನೆ. ತ್ಯಾರೇಜ ಆಪನೀ ಕೋಮ ಸುಧಾರಸೆ.

ಜಗನ್ನಾಥರಾವ—(ಎದ್ದು) ಶ್ರೀಯುತ ಅಶ್ವಿನೀಕುಮಾರ ಬಂಗಾಲಿ ಇವರು ಹೇಳಿದ್ದು ಅತಿ ಯಥಾರ್ಥವದೆ. ಇಪ್ಪತ್ತೈದು ವರ್ಷದ ಹುಡುಗನಿಗೆ ಸಂಸಾರದ ರಹಸ್ಯವೇನು ತಿಳಿಯುವದು? ಅದಕ್ಕೆ ಗಂಭೀರ, ಅನುಭವಿಕ, ಸುಜ್ಞ ವೃದ್ಧ ಜನರೇ ಬೇಕು. ರಾವಬಹಾದ್ದೂರರ ಈ ಮಹತ್ಕಾರ್ಯದ ಸಲುವಾಗಿ ಅವರಿಗೆ ನಾನು ಬಹಳ ಅಭಾರಿಯಾಗಿದ್ದೇನೆ.

ಲಂಬೋದರಪಂತ—(ಮರಾಠಿ) ಮೀತರ ಮ್ಹಣತೋ ಕೀ, ಯಾ ಸರ್ವಾಂತ ರಮಾಬಾಯಿಲಾಚ ಉಚ್ಚಸ್ಥಾನ ಆಣಿ ವಿಶೇಷಮಾರ್ಕ ದಿಲೆ ಪಾಹಿ ಜೇತ. ಲೋಕಾಪವಾದಾಕಡೆ ದುರ್ಲಕ್ಷ ಕರೂನ ತ್ಯಾನೀ ಆಪಲ್ಯಾ ವೀಸ ವರ್ಷಾಚ್ಯಾ ಸುಶಿಕ್ಷಿತ ಪೋರೀಲಾ ರಾವಬಹಾದ್ದೂರಾಸಾರಖ್ಯಾ ಬಡ್ಯಾ ಥೋರ, ನಾಮಾಂಕಿತ, ವಯಾಚ್ಯಾ ಗೃಹಸ್ಥಾಚ್ಯಾ ಗಳೀಂ ಆಪಲ್ಯಾ ಮುಲೀ- ಚಾ ಗಳಾ ದೇಣ್ಯಾಚೆ ಮನೋಧೈರ್ಯ ದಾಖವಿಲ್ಯಾ ಬದ್ದಲ ಆಜಚ್ಯಾ ಯಾ ಸಮಾರಂಭಾಂತ ಮಂಡಳೀನೇ ತ್ಯಾನಾ ಏಕ ಮಾನಪತ್ರ ಅರ್ಪಣ ಕರಾಯಲಾ ಪಾಹಿಜೆ ಅಸೆ ಮೀ ಪ್ರಾಂಜಲಪಣೆ ಮಂಡಳೀಪುಢೆ ಅತ್ಯಾಗ್ರಹಾಚೀ ಸೂಚನಾ ಠೇವಿತೋ.

ರಮಾಬಾಯಿ—(ಮುರುಕದಿಂದ) ಛೀ ಛೀ ಇದರಲ್ಲಿ ನನ್ನ ಗೌರವ ವೇನು? ಇದೆಲ್ಲ ರಾವಬಹಾದ್ದೂರರ ಪುಣ್ಯ.

ವಿಶ್ವಾಸ—(ಜನಾಂತಿಕಂ) ಛೀ ಛೀ ಇದರಲ್ಲಿ ಆ ಸುಶೀಲಕುಮಾರಿಯನ್ನು ದುರ್ಮಾರ್ಗದಲ್ಲಿ ದೂಡುವದಕ್ಕಾಗಿ ಕಪಟಜಾಲದಿಂದ ಆ ಮುದುಕನ ಕೊರಳಿಗೆ ಕಟ್ಟಿದ ಶ್ರೇಯಸ್ಸೆಲ್ಲ ನಿನ್ನ ಪಾಲಿಗೇ ಸರಿ. ತಗೋ ಮಾನಪತ್ರವನ್ನು, ಬೇಕಾಗಿದ್ದರೆ ಇಲ್ಲಿಯೇ ಸ್ವಯಂವರವನ್ನಾದರೂ ಮಾಡಿಕೋ; ನಾಚಿಕೆಗೇಡಿ. (ಪ್ರಕಾಶಂ) ಮಿ. ಲಂಬೋದರಪಂತರ ಪ್ರಪೋಜಲ್ಲಿಗೆ ನನ್ನ ಒಪ್ಪಿಗೆಯದೆ. (ಚಪ್ಪಾಳೆ)ಆದರೆ ಈ ಪ್ರಸಂಗದಲ್ಲಿ ನಾನು ಎಲ್ಲರಿಗೂ ಹೆಚ್ಚಾಗಿ ಮಿಸ್ ಕಮಲಾವತಿಯವರಿಗೇ ಹೆಚ್ಚಿಗೆ ಮಾನಕೊಡುತ್ತೇನೆ. ಯಾಕಂದರೆ ಪ್ರೀವಿಯಸ್ ಪಾಸಾದ ಸುಶೀಲ ಕುಮಾರಿಕೆಯು ಆತ್ಮಸಂತೋಷದಿಂದ ಜರಠವಿವಾಹಕ್ಕೆ ಒಪ್ಪಿಗೆ ಕೊಟ್ಟಿರುವದರಿಂದ ಇನ್ನು ವೃದ್ಧರ ಉತ್ತಮಸ್ಥಾನದಲ್ಲಿ ಶನಿಗ್ರಹವು ಬಂದಿತೆಂದು ತಿಳಿಯುತ್ತೇನೆ.

ಜಗನ್ನಾಥರಾವ—ಸಭಿಕ ಮಹಾಶಯರೇ, ಈ ಆನಂದ ಪರ್ಯವಸಾಯಿ ಮಂಗಲೋತ್ಸವದ ಸ್ಮರಣಾರ್ಥವಾಗಿಯೂ ಮತ್ತು ಜರಠ ವಿವಾಹವನ್ನು ಪ್ರಚಾರದಲ್ಲಿ ತರುವದಕ್ಕಾಗಿಯೂ, ಮತ್ತು ತರುಣರ ಬಲೆಗೆ ಬೀಳುತ್ತಿರುವ ಕುಮಾರಿಕೆಯರ ಉದ್ಧಾರಕ್ಕಾಗಿಯೂ ಒಂದು 'ವೃದ್ಧ ವಿವಾಹಸಂಘ'ವನ್ನು ಸ್ಥಾಪಿಸುವದು ಅಗತ್ಯವಾಗಿ ತೋರುತ್ತದೆ.

ಲಂಬೋದರ—ಯಾಲಾ ಮಾಝಾ ಟೇಕಾ ಆಹೆ.

ಗೋಸ್ವಾಮಿ—ಹಂಬಿ ತುಮಾರೆ ಹಾತಕು ಹಾತ ಜೋಡತಾಹು.

ರಾವಬಹಾದ್ದೂರ—(ಎದ್ದು)ಲೇಡೀಜ ಎಂಡ ಜಂಟ್ಲಮೆನ್, 'ಓಲ್ಡ ಈಜ ಗೋಲ್ಡ' 'ಹಳೆಯದೆಲ್ಲ ಹೊನ್ನು' ಎಂಬ ಸುಧಾರಿಸಿದ ಆಂಗ್ಲಭಾಷೆಯ ಗಾದೆಗನುಸರಿಸಿ ಲಗ್ನದಂಥ ಹೋಲ ಲಾಯಿಫ ಪಾರ್ಟ್ನರಶಿಪ್ಪಿನ ವಿಷಯದಲ್ಲಿ ಯಾರಾದರೂ ಇದರ ಸೋಳಾ ಆಣೆ ಉಪಯೋಗ ಮಾಡಿಕೊಳ್ಳಲಿಕ್ಕೆ ಬೇಕು. ಆದರೆ ಇದರ ಕಡೆಗೆ ನಮ್ಮ ಜನರ ತಿರಸ್ಕಾರವು ಹೆಚ್ಚಾಗಿರುವದರಿಂದ ಮೇಲಿಂದ ಮೇಲೆ ಎಷ್ಟೋ ಮಾರಾಮಾರಿಯಾಗುವ ಪ್ರಸಂಗ ಬರುತ್ತದೆ. ಜೆಗ್ಗೆಯನ್ನು ಹೆಚ್ಚು ಹೆಚ್ಚು ಕಾಸಿದಂತೆ ಅದು ರುಚಿಕರ, ಸುವಾಸಿಕ, ಮತ್ತು ತಾಳಿಕೆಯುಳ್ಳದ್ದಾಗುವದು. ಆಚಾರದಲ್ಲಿ ವಿಚಾರದಲ್ಲಿ ವ್ಯವಹಾರದಲ್ಲಿ ಹಳೆಯ ಜನರಿಗೇ ಅಗ್ರಸ್ಥಾನವು ಸಿಗುವದು. ಬಿಕ್ಕಟ್ಟಿನ ಪ್ರಸಂಗದಲ್ಲಿ ಧೈರ್ಯಗೆಡದೆ ಕೆಲಸಸಾಗಿಸುವ

ವರು ನಮ್ಮಂಥವರೇ. ಅದಕ್ಕಂತೇ 'ಹಳೆಯ ಎತ್ತು ಹೊಳೆಯಲ್ಲಿ ಹೂಡು' ಎಂಬ ಗಾದೆಯು ಸಿದ್ಧವಾಗಿದೆ. ಹಳೆಯ ಮಾತು, ಹಳೆಯಪುರಾಣ ಇವುಗಳಿಗೇ ಮಹತ್ವ ಹೆಚ್ಚು. ವೇದಗಳು ಬಹಳ ಹಳೆಯವೆಂದೇ ಅವುಗಳಿಗೆ ಇಷ್ಟು ಮಹತ್ವ ಬಂದಿದೆ. ಆದ್ದರಿಂದ ಸಿಸ್ಟರ್ಸ ಎಂಡ ಬ್ರದರ್ಸ್, ಲಗ್ನದಂಥ ಮಹತ್ವದ ಮತ್ತು ಸಾವಿರ ವರ್ಷ ಸಂತಾನದ ಕಾರ್ಯದಲ್ಲಿ ಈ ಹಳೆತನಕ್ಕೆ ಆದರವು ಬೇಕೋ ಬೇಡವೋ?

ಲಂಬೋದರ—ಹೀಅರ, ಹೀಅರ.

ರಾವಬಹಾದ್ದೂರ—ಚಂಚಲ ಮನಸ್ಸಿನ ಇಪ್ಪತ್ತೈದು ವರ್ಷದ ಹುಡುಗನಿಗೆ ಚಂಚಲ ಕನ್ನಿಕೆಯನ್ನು ಕೊಟ್ಟು ಮದುವೆ ಮಾಡಿದರೆ ಸಂಸಾರವೆಲ್ಲ ಚಂಚಲವೇ ಆಗುವದು. ಆದ್ದರಿಂದ ೨೦ಕ್ಕೆ ೧೫ ಈ ಪ್ರಮಾಣದಿಂದ ವರ ಮತ್ತು ವಧುವಿನ ವಯಸ್ಸು ಇರಲಿಕ್ಕೆ ಬೇಕು. ಎಂದರೆ ನಮ್ಮ ಸಂಸಾರವು ಸೌಂಡ ಎಂಡ ಸೇಫ ಪಾಯಿಂಟಿನ ಮೇಲೆ ಸಾಗುವದು. ಆದರೆ ನನ್ನ ಡಿಯರ ಲೇಡಿಯು ನನ್ನ ಅರವತ್ತು ವರ್ಷಕ್ಕೆ ತಕ್ಕಂತೆ ೧೫ ವರ್ಷದವಳಿರಬೇಕಾಗಿತ್ತು.

ವಿಶ್ವಾಸ—(ಜನಾಂತಿಕಂ) ಎಂದರೆ ಆಕೆಯು ಬರುವದರೊಳಗೆ ಇವರು ಮುಸಗಾಲಿನ ದಾರಿ ಹಿಡಿದಿರುತ್ತಿದ್ದರು.

ರಾ. ಬ.—ಆದರೆ ಆಕೆಯು ಅತ್ಯಾಗ್ರಹ ಮಾಡಿದ್ದಕ್ಕಾಗಿ ಈ ಲಗ್ನಕ್ಕೆ ಒಪ್ಪಬೇಕಾಯಿತು.

ವಿಶ್ವಾಸ—(ಜನಾಂತಿಕಂ) ಅದು ದೇವರಿಗೆ ಗೊತ್ತು.

ರಾ. ಬ.—ಇಲ್ಲದಿದ್ದರೆ ೧೪-೧೫ ವರ್ಷದ ಹುಡುಗೆಯನ್ನೇ ಮಾಡಿಕೊಳ್ಳಬೇಕೆಂಬ ಮನಸಿತ್ತು.

ವಿಶ್ವಾಸ—(ಜನಾಂತಿಕಂ) ಇನ್ನೂ ಹರೇದ ಹುಡಗ, ಮಾಡಿಕೋ.

ಲಂಬೋದರ—ವಾ ವಾರೆ ಬಹಾದ್ದೂರ, ತುಮೊ ತೋ ಆಜ ಲಯಿ ಕಮಾಲ ಕೇಲಿ ಬಾಬಾ

ರಮಾ—ರಾವಬಹಾದ್ದೂರರ ಭಾಷಣ ಕೇಳಿ ನನಗೂ ಮಾತಾಡಬೇಕೆನಿಸುತ್ತದೆ.

ವಿಶ್ವಾಸ—(ಜನಾಂತಿಕಂ) ಹು! ಬಿಡಿರಿ ಬಾಯಿ, ನಿಮ್ಮ ಕೈಹಿಡಿಯುವರಾರು? ಸುರಿಯಲಿ ಮುಕ್ತಾ ಫಲಗಳು ಬಾಯಿಂದ.

ರಮಾ—ಆದರೆ ಪುರುಷರಲ್ಲಿ ಮಾತಾಡಬೇಕಾದರೆ ಸ್ವಲ್ಪ ಹೆದರಿಕೆ ಬರುತ್ತದೆ.

ವಿಶ್ವಾಸ—(ಜನಾಂತಿಕಂ) ಮಗಳನ್ನು ಸುಡುಗಾಡಿಗೆ ಧಾರೆಯೆರೆಯುವ ನಿನಗೆ ಹೆದರಿಕೆ ಬೆದರಿಕೆಯೆಲ್ಲಿಯದು? ಹೃದಯವಿದ್ದರೆ ಹೆದರಿಕೆ.

ರಾವಬಹದ್ದೂರ—ಈಗ ತಮ್ಮೆಲ್ಲರ ಅಪ್ಪಣೆಯ ಮೇರೆಗೆ ಈ ವೇಳೆಯಲ್ಲಿ ವೃದ್ಧವಿವಾಹ ಸಂಘವನ್ನು ಸ್ಥಾಪಿಸುವದಲ್ಲದೆ ಅದಕ್ಕೆ ಪೇಟ್ರನ್ ಮತ್ತು ಉತ್ಪಾದಕ ಈ ನಾತೆಯಿಂದ ಒಂದು ಸಾವಿರ ರೂಪಾಯಿ ಕೊಡುತ್ತೇನೆ.

ಎಲ್ಲರು—ಹಿಯರ ಹಿಯರ (ಚಪ್ಪಾಳೆ)

ಜಗನ್ನಾಥ—ನಾಲ್ವತ್ತು ವರ್ಷದ ವಯಸ್ಸು ಮೀರಿದ ಪ್ರತಿಯೊಬ್ಬ ಮನುಷ್ಯನು ಇದಕ್ಕೆ ವರ್ಗಣಿದಾರನಾಗಿ ಈ ಸಂಘದ ಯಥಾಯೋಗ್ಯ ಉಪಯೋಗ ಮಾಡಿಕೊಳ್ಳಬೇಕೆಂದು ವಿನಂತಿಯಿದೆ; ಮತ್ತು ನಾನು ನೂರು ರೂಪಾಯಿ ಕೊಡುತ್ತೇನೆ.

ವಿಶ್ವಾಸ—ಅವಶ್ಯ-ಅತ್ಯವಶ್ಯ. ಇಂಥ ಸಾರ್ವಜನಿಕ ಮತ್ತು ಸಾರ್ವಕಾಲಿಕ ದೇಶಹಿತ ಕಾರ್ಯಕ್ಕೆ ಎಲ್ಲರೂ ಕೈಕೊಡಲಿಕ್ಕೇ ಬೇಕು. (ಜನಾಂತಿಕಂ) ಕಿತ್ತೊಗೆಯುವಕ್ಕೆ (ಪ್ರಕಾಶಂ) ಆದ್ದರಿಂದ ಈ ಸಂಘದ ಉದ್ದೇಶ ಮತ್ತು ಕಾರ್ಯಕ್ಷೇತ್ರದ ಸ್ವಲ್ಪ ರೂಪರೇಷೆಯನ್ನು ತಿಳಿಸಿಬಿಟ್ಟರೆ ಈಗಿಂದೀಗಲೇ ಎಷ್ಟೋ ಮುದಿ ಹುಡುಗರು ವರ್ಗಣಿ ಕೊಡಲಿಕ್ಕೆ ಸಿದ್ಧರಾಗಬಹುದು.

ಅಶ್ವಿನೀ—ಮೀಬಿ ತಸಾಚ ಸಾಂಗತೇ.

ರಾವಬಹದ್ದೂರ—ಈ ಸಂಘದ ಕಾರ್ಯಕಲಾಪಗಳನ್ನು ಮೆಂಬರರ ದುಸರೆ ಬೈಠಕಿನಲ್ಲಿ ನಿರ್ಣಯಿಸಿ ಪ್ರಸಿದ್ಧಿಸಲಾಗುವದು. ಆದರೆ ಮುಖ್ಯ ಉದ್ದೇಶವೆಂದರೆ, ಜರಠ ವಿವಾಹಕ್ಕೆ ಅಡ್ಡಬರುವ ಎಲ್ಲ ಬಾಬುಗಳನ್ನು ಕಿತ್ತೊಗೆಯುವದು, ಹುಡುಗೆಯ ತಂದೆ-ತಾಯಿಗಳಿಗೆ ಇಲ್ಲದ್ದೊಂದು ಸಂಕಟವನ್ನು ತಂದಾದರೂ ಮುದುಕನಿಗೆ ಮಗಳನ್ನು ಕೊಡುವಂತೆ ಮಾಡುವದು....

ವಿಶ್ವಾ—(ಜನಾಂತಿಕಂ) ಅಂತೂ ಈ ರಾವಬಹಾದ್ದೂರರೂ ಹೀಗೆಯೇ ಮಾಡಿದಂತೆ ಕಾಣುತ್ತದೆ.

ರಾವ—ಮತ್ತು ಜರಠ ವಿವಾಹಗಳನ್ನು ನಿರ್ವಿಘ್ನವಾಗಿ ಸಾಗಿಸುವದು, ಮತ್ತು ತರುಣ ಕುಮಾರಿಕೆಯರ ಖಾನೇಸುಮಾರಿ ಮಾಡಿ ಲೆಖ್ಖವನ್ನು ತೆಗೆದಿಡುವದು, ಅದರಂತೆ ಜರಠರ ಸಂಖ್ಯೆಯನ್ನು ಕೂಡಿಸುವದು ಇಷ್ಟೇ, ಇಂಥ

ಸತ್ಕಾರ್ಯಕ್ಕೆ ಶಕ್ತ್ಯನುಸಾರ ಕೈಹಾಕಿ ಹಿಂದುಳಿದ ಈ ಸುಧಾರಣೆಯನ್ನು ಆದಷ್ಟು ಬೇಗನೆ ಹಿಂದುಸ್ತಾನದ ತುಂಬ ಪ್ರಸಾರಗೊಳಿಸಿ ದೇಶದ ಜನಸಂಖ್ಯೆಯನ್ನೂ ಸಾಂಪತ್ತಿಕ ಸ್ಥಿತಿಯನ್ನೂ ನೀತಿವುತ್ತೆಯನ್ನೂ ಬೆಳಿಸಿ ದೇಶೋದ್ಧಾರ ಮಾಡುವದು ಪ್ರತ್ಯೇಕ ವ್ಯಕ್ತಿಯ, ಜ್ಞಾತಿಯ, ಪ್ರತ್ಯೇಕ ರಾಷ್ಟ್ರದ ಕರ್ತವ್ಯಸಿದ್ಧ ಮತ್ತು ವಾರ್ಧಕ್ಯಸಿದ್ಧ ಹಕ್ಕು ಆಗಿದೆ. (ಚಪ್ಪಾಳೆ)

ವಿಶ್ವಾಸ—(ಜನಾಂತಿಕಂ) ವೃದ್ಧಕಪಿಮಂಡಳ, ಏಳಿರಿ, ಹೇಳಿರಿ ನಿಮ್ಮ ವರ್ಗಣಿ ಅಂಕಿಯನ್ನು. ಈ ಕಲ್ಯಾಣಕಪಿಕಾರ್ಯಕ್ಕೆ ನಮ್ಮ ಸಂಪೂರ್ಣ ಸಹಾನುಭೂತಿಯದೆ. (ಪ್ರಕಾಶಂ) ಶಾಬಾಶ್! ಇದರಲ್ಲಿ ನಮ್ಮ ಜರಠರ ಧೂರ್ತತನವು ಬಹಳ ಚೆನ್ನಾಗಿ ವ್ಯಕ್ತವಾಗುತ್ತದೆ. ತರುಣಬಂಧುಗಳೇ, ಈಗ ಈ ವೃದ್ಧಮಂಡಲದ ಮೇಲೆ ಬಂದಿರುವ ತೊಂದರೆಯೇ ನಮ್ಮ ಮೇಲೆಯೂ ಮುಂದೆ ಮುಪ್ಪಿನಲ್ಲಿ ಬರಬಹುದಾದ್ದರಿಂದ, ತರುಣರೆಲ್ಲರೂ ಮುಂಜಾಗ್ರತರಾಗಿ ಈ ಸಂಘಕ್ಕೆ ವರ್ಗಣಿದಾರರಾಗುವದು ಅತ್ಯವಶ್ಯವಾಗಿದೆ. ಆದುದರಿಂದ ತರುಣರು ಇದಕ್ಕೆ ಮೆಂಬರರಾಗಬೇಕೆಂದು ವಿನಂತಿ ಮಾಡಿಕೊಳ್ಳುವದಲ್ಲದೆ, ತರುಣರನ್ನೂ ವಿಶೇಷವಾಗಿ ಸಂಘದ ಮೆಂಬರರನ್ನಾಗಿ ಮಾಡಿಕೊಳ್ಳಬೇಕೆಂದು ನನ್ನ ವಿನಂತಿಯದೆ. (ಜನಾಂತಿಕಂ) ಎಂದರೆ ಇವರು ಹೊಂಚು ಹಾಕುವ ತರುಣಿಯನ್ನು ಗಂಡಾಂತರದಿಂದ ಉಳಿಸಲಿಕ್ಕೆ ಬರುತ್ತದೆ. (ಪ್ರಕಾಶಂ) ಮತ್ತು ನಾನು ಈ ಸಂಘಕ್ಕೆ ಐವತ್ತು ರೂಪಾಯಿ ಕೊಡುತ್ತೇನೆ. ಇದಲ್ಲದೆ ರಾವಬಹಾದ್ದೂರರೇ ಈ ಸಂಘಕ್ಕೆ ಚೇರಮನ್ನರಾಗಬೇಕೆಂದು ವಿನಂತಿಮಾಡಿಕೊಳ್ಳುತ್ತೇನೆ.

ರಾವಬಹಾದ್ದೂರ—ಇಲ್ಲಿಗೆ ಸಭಾಕಾರ್ಯವು ಮುಗಿಯಿತು. ಪಾತರದವಳನ್ನು ಬರಹೇಳು. (ನಾಚು ನಡೆಯುವದು.) ನಡುನಡುವೆ ಎಲ್ಲರೂ ಸೋಡಾ, ಚಹಾ, ಸಿಗರೇಟ, ಬ್ರಾಂಡಿ ಇವುಗಳ ವಿಷಯವು ನಡೆಯುವದು. ಒಬ್ಬೊಬ್ಬರಾಗಿ ಹೊರಡುವರು. ಕಮಲಾವತಿಯು ದುಃಖಮುದ್ರೆಯಿಂದ ನಡೆದಿರುವಳು.

ವಿಶ್ವಾಸರಾವ—(ಮುಂದೆ ಬಂದು) ನೋಡಿದಿರಾ ಈಗಿನ ಸುಧಾರಣೆಯನ್ನು. ನೀತಿಯಿಲ್ಲ-ಜಾತಿಯಿಲ್ಲ ಮಾನವಿಲ್ಲ-ಮರ್ಯಾದೆಯಿಲ್ಲ. ಸುರಾಪಾನ ವ್ಯಭಿಚಾರಗಳೆಂಬ ದುಷ್ಟ ಕಾರ್ಯಗಳು ಸಹ ಬೈಲಿಗೆ ಆಗಹತ್ತಿದವು. ಸುರಾಪಾನಕ್ಕಂತೂ ಜಾತಿಯ ನಿಯಮವೇ ಉಳಿದಿಲ್ಲ. ಇಷ್ಟೇ ಅಲ್ಲ, ನೆರೆಗುಡುಕರು ಸುಧಾರಿಸಿದವರೆಂದಾಗಿ ಹೋಗಿದೆ. ಈ ನೆರೆಯ ಹಾವಳಿಯಿಂದ ಎಷ್ಟು ಸಂಸಾ

ರಗಳು ಮಣ್ಣುಗೂಡಿವೆಯೆಂದು ಹೇಳಲಿಕ್ಕೆ ಅಸಾಧ್ಯವಾಗಿದೆ. ಸರಕಾರದವರಂತೂ ಈ ಕಡೆಗೆ ಲಕ್ಷ್ಯ ಕೊಡುವದಿಲ್ಲ. ಶ್ರೀಮಂತ ಜನರಂತೂ ಸುರಾಭಕ್ತರಾಗಿರುವರು. ಬೇಡವೆಂದು ಹೇಳಲಿಕ್ಕೆ ಹೋದವರಿಗೇ ಗೋಳೀಬಾರು-ಅಯ್ಯೋ ದೇಶದ ದುರ್ದೈವವೇ.

ಪದ:—ರಾಗ ಕೇದಾರ.

ಹೀನ ದೈವಿಯಹುದೆಲೋ ನೀ ಭಾರತ ‖ ಪಲ್ಲ ‖
ಬಡಜನಗಳು ಕಡಿಮೆಯಿಲ್ಲ | ದುಡಿವ ಜನಕೆ ಕೆಲಸವಿಲ್ಲ |
ಕಿಡುಚಟಗಳ ವಶದಿನೆಲ್ಲಿ | ದೃಢಶರೀರವುಳಿಯಲಿಲ್ಲ ‖ ೧ ‖
ದೇಶವೆಲ್ಲ ಸ್ವಾರ್ಥಮಯವು | ಕಾಸಿಗಾಗಿ ವೈರಭರವು |
ದೇಶದೇಳ್ಗೆಯಲ್ಲಿ ಮರವು | ಪೇಸಿವೇಷದೊಳಗೆ ಮನವು ‖ ೨ ‖

---

## ಒನೆಯ ಪ್ರವೇಶ.

ಸ್ಥಳ—ಮಹಲು, ಕಮಲೆ ಇಂದಿರೆಯರ ಸಂವಾದ.

ಇಂದಿರಾ—ಕಮಲಾವತೀ, ಒಬ್ಬ ಹಳ್ಳಿಗಾಡ ಹುಡುಗೆಯು ತಿಳಿಯದೆ ತನ್ನ ತಂದೆ-ತಾಯಿಗಳ ದಯಾದಾಕ್ಷಿಣ್ಯಗಳಿಗೆ ಒಳಗಾಗಿ ಇಂಥ ಅಯೋಗ್ಯ ಕೆಲಸವನ್ನು ಮಾಡಿದರೆ ಆಶ್ಚರ್ಯವಲ್ಲ. ಆದರೆ ನಿನ್ನಂಥ ಪ್ರೌಢ ಸುಶಿಕ್ಷಿತ ಸ್ತ್ರೀಯು ೬೦ ವರ್ಷದ ಮುದುಕನಿಗೆ ಮಾಲೆಯನ್ನು ಹಾಕಲಿಕ್ಕೆ ಸಿದ್ಧಳಾಗಬೇಕಾದರೆ ಇದರಲ್ಲೇನೋ ಗೌಪ್ಯಗೋಪನವಿರಲಿಕ್ಕೇಬೇಕು.

ಕಮ—ಇಂದಿರೇ, ಇದರಲ್ಲೇನು ಗೌಪ್ಯಗೋಪನ! ನಾನು ನನ್ನ ಜನ್ಮದ ಅಧಃಪತನವನ್ನು ಮಾಡಿಕೊಂಡೆನೆಂಬದು ನನಗೆ ತಿಳಿಯುವದಿಲ್ಲವೆನ್ನಬೇಡ. ಆದರೆ ಮನುಷ್ಯನ ಇಚ್ಛೆಯಿರಲಿ ಇಲ್ಲದಿರಲಿ, ಅಷ್ಟೇಕೆ ಮನಸ್ಸಿನ ವಿರುದ್ಧವಾಗಿ ಸಹ ಪರಿಸ್ಥಿತಿಯು ಮಾಡಬಾರದ್ದನ್ನು ಸಹ ಮಾಡಲಿಕ್ಕೆ ಹಚ್ಚುತ್ತದೆ.

ಇಂದಿರಾ—ಗೆಳತೀ, ನಿನ್ನಂಥ ಶಾಂತತಾಪ್ರಿಯಳನ್ನು ಅಡ್ಡಹಾದಿಗೆ ಒಯ್ಯುವ ಪರಿಸ್ಥಿತಿಯಾದರೂ ಯಾವದು?

ಕಮಲಾ—ಕೆಲಸವು ಮುಗಿದು ಹೋದಮೇಲೆ ಆ ವಿಷಯದ ವಾದ ವಿವಾದ ಮಾಡುವದರಲ್ಲಿ ಅರ್ಥವಾದರೂ ಏನು? ಇಂದಿರೇ, ಇದು ಅಕಾರ್ಯವೆಂದು ನನಗೆ ತಿಳಿಯುತ್ತಿದ್ದರೂ, ತಿಳಿಸ್ಹೂ ತಿಳಿದು ವಿಷದ ಪಾತ್ರೆಯನ್ನು

ಬಾಯಿಗೆ ಹಚ್ಚಿಕೊಳ್ಳಬೇಕಾದರೆ ಅದಕ್ಕೇನಾದರೂ ಒಂದು ಮಹತ್ವದ ಕಾರಣ ಇರಲಿಕ್ಕೇಬೇಕೆಂದು ತಿಳಿಯುವದಿಲ್ಲವೇ?

ಇಂದಿರಾ—ಕಮಲಾವತೀ, ನನ್ನ ಮೇಲೆ ಸಹ ನಿನ್ನ ವಿಶ್ವಾಸವು ಹೋದಂತೆ ಕಾಣುತ್ತದೆ. ಇಲ್ಲದಿದ್ದರೆ ನನ್ನೆದುರಿಗೆ ಅದನ್ನು ಹೇಳದಿರುವ ಕಾರಣ ವೇನು?

ಕಮಲಾ—ಗೆಳತೀ, ನನ್ನ ಮೇಲೆ ಪ್ರೇಮವಿದ್ದರೆ ಇಷ್ಟಕ್ಕೆ ಈ ವಿಷಯವನ್ನು ನಿಲ್ಲಿಸಿ ಶಾಂತಳಾಗು. ಹೆಚ್ಚಿಗಿನ್ನೇನು ಹೇಳಲಿ?

ಇಂದಿರಾ—ಕಮಲಕ್ಕಾ, ಅನುರೂಪಪತಿಯೊಡನೆ ಲಗ್ನಮಾಡಿಕೊಂಡು ಸಮಾಜ ಸೇವಾಕಾರ್ಯದಲ್ಲಿ ಸಹಕಾರಿತ್ವವನ್ನು ಮಾಡಬೇಕೆಂದು ಮನಸ್ಸಿನಲ್ಲಿ ಮಂಡಿಗೆ ತಿಂದದ್ದೆಲ್ಲ ಹೊಳೆಯಲ್ಲಿ ಹೋಮ ಮಾಡಿದಂತಲ್ಲವೇ? ಇಂಥ ಮುದುಕನೊಡನೆ ಸಂಸಾರಮಾಡುವದಾದರೂ ಹೇಗೆ? ಈ ಲಗ್ನವನ್ನು ಮುರಿಯಲಿಕ್ಕೆ ಬರಲಾರದೇನು?

ಕಮ—ಛೀ ಛೀ! ಒಳಿತನ್ನು ಇಂದಿರೇ? ಅದು ಅಜಾಣ ಹೆಂಗಸರ ನಡತೆ! ಈ ಲಗ್ನಕ್ಕೆ ಯಾರಾದರೂ ನನ್ನ ಮೇಲೆ ಜೋರು ಜುಲುಮೆ ಮಾಡಲಿಕ್ಕೆ ನಾನೇನು ಸಣ್ಣ ಕೂಸಲ್ಲ. ಇಂದಿರೇ, ದೈವದ ಯೋಗಾಯೋಗವನ್ನೆಂದೂ ಯಾರಿಗೂ ತಪ್ಪಿಸಲಿಕ್ಕೆ ಬರುವದಿಲ್ಲ. ಪೂರ್ವಜನ್ಮದಲ್ಲಿ ನಾನು ದೇವರ ಪೂಜೆಯನ್ನೇ ಮಾಡಲಿಲ್ಲವೆಂದ ಮೇಲೆ ಅತನ ಕೃಪೆಯಾದರೂ ಹೇಗೆ ಆದೀತು?

ಇಂದಿರಾ—ಮುದುಕನ ಹೆಂಡತಿಯಾದ ಮೇಲೆ ಅದಕ್ಕೆ ತಕ್ಕಂತೆ ಅಜ್ಜಮ್ಮನ ವೇದಾಂತದ ಮಾತುಗಳೇ ಬೇಕು.

ಕಮಲಾ—ಗೆಳತೀ, ಹುಡುಗಾಟವಲ್ಲ! ವ್ಯವಹಾರದಲ್ಲಿ ಮೇಲಿಂದ ಮೇಲೆ ವೇದಾಂತದ ಉಪಯೋಗವಾಗದಿದ್ದರೂ ಪ್ರಸಂಗವಿಶೇಷದಲ್ಲಿ ಅದೇ ಮನಸ್ಸಿನ ಸಮತೋಲಸ್ಥಿತಿಯನ್ನು ಕಾಯುವದು.

ರಮಾಬಾಯಿ—(ಮುರುಕದಿಂದ ಬಂದು) ಅವ್ವಾ ಇಂದಿರೇ, ನೀನು ಯಾವಾಗ ಬಂದೆಯೋ? ಅಹಹ! ನಿನ್ನೇ ನನ್ನ ಕಮಲಕ್ಕನ ಲಗ್ನವು ಎಷ್ಟು ವೈಭವದಿಂದ ಆಯಿತೆಂದು ಹೇಳಲಿ? ಆ ಸಾಹೇಬರು, ಆ ಮಡಮ್ಮರು, ಬಂಗಾಲಿ, ಮರಾಠಿ—

ಇಂದಿರಾ—ಆದರೆ ರಮಾಬಾಯಿ, ಇದನ್ನೇನೂ ನೀವು ಚೆನ್ನಾಗಿ ಮಾಡಲಿಲ್ಲ. ಯಾಕೆಂದರೆ—

ಪದ—ಸದಾ ಪ್ರಣಯಾ ವಿಲಾಸಿನಿ ಎಂಬಂತೆ.

ಸತೀ ಸುಖದಾ ನಿಧಾನವು | ಪತಿಲಾಭವು ಸಂಸೃತಿ ಸಾರವು ತಾ || ಪ ||
ಮಲಿನ ವನಜ ವನಿತಾ ನೋಡಲು | ನಲಿವಳು ನೀರೇಜ ಸಖನ || ೧ ||
ಚಪಲ ತರುಣಿ ವರ ಸೌದಾಮಿನಿ | ಕುಣಿವಳು ಮೇಘಪತಿ ಬರಲು || ೨ ||

ಬಾಯಿ, ನಮ್ಮಂಥ ಎಳೆ ಹುಡುಗೆಯರು ನಿಮಗೆ ತಿರುಗಿ ಪ್ರಶ್ನೆಮಾಡು ವದು ಉದ್ಧಟತನವೇ ಸರಿ! ಇರಲಿ. ಕಮಲಾವತಿಯನ್ನು ನೀವೇ ನವಮಾಸ ಹೊತ್ತು ಹಡೆದು ಬೆಳೆಯಿಸಿ ಕಡೆಗೆ ಆಕೆಯ ಸುಖವನ್ನು ಮಣ್ಣುಗೂಡಿಸುವ ಕೆಲಸವನ್ನೇಕೆ ಮಾಡಿದಿರಿ?

ರಮಾ—ಹೌದ ಜಾಣೆ, ಇದಕ್ಕಾಗಿಯೇ ಬಂದೆಯೇನು ಇಲ್ಲಿಗೆ? ಯಾರ ದಾದರೂ ಮನೆಯು ಬೀಳುತ್ತಿದ್ದರೆ ಅದನ್ನು ಹೇಗಾದರೂ ಮಾಡಿ ಸುಧಾರಿಸ ಬೇಕು; ಅದನ್ನು ಬಿಟ್ಟು ದೇವರ ದಯೆಯಿಂದ ಒಳ್ಳೇ ಗಟ್ಟಿಮುಟ್ಟಾಗಿ ತುಂಬಿ ತುಳುಕುತ್ತಿರುವ ಮನೆಯನ್ನೇ ಕೆಡವಿ ನೆಲಸಮ ಮಾಡಬೇಕೆಂದಿರುವಿಯೇನು? ಅವ್ವವ್ವ! ಈಗಿನ ಹುಡುಗಿಯರಿಗೆ ಗುರು-ಹಿರಿಯರ ಹೆದರಿಕೆಯೇ ಇಲ್ಲ; ದಯಾ ದಾಕ್ಷಿಣ್ಯ ನಾಚಿಕಿಗಳಂತೂ ಇಲ್ಲವೇಇಲ್ಲ. ಹುಚ್ಚುಹುಡುಗೇ, ರಾ. ಬ. ರಂಥ ಗಂಭೀರ, ಶ್ರೀಮಂತ, ಉತ್ಸಾಹಿ, ಸುಧಾರಕ, ಸರಕಾರದಲ್ಲಿ ಪ್ರತಿಷ್ಠಿತ ಗಂಡನು ನನ್ನ ಮಗಳಿಗೆ ಗುರು-ಹಿರಿಯರ ಪುಣ್ಯದಿಂದ ಸಿಕ್ಕಿದ್ದರೂ, ನೀನು ನನ್ನ ಮಗಳ ಕಿವಿ ತಿರುವಲಿಕ್ಕೆ ಬಂದಿರುವಿಯೇನು? ಒಳ್ಳೇ ಚೆನ್ನಾದ ಗೆಳತಿ! ನೋಡೋಣ, ಬೆಳಗಾದರೆ ಬಂತು ಅಕ್ಕನಾಟ ಅಂಗಳಕ್ಕೆ! ನೀನೇನು ಹರೆಯದ ಗಂಡನನ್ನು ಮಾಡಿಕೊಂಡು ನಿಶಾನೆ ಹಚ್ಚುತ್ತಿಯೇ ನೋಡೋಣ. ಇಂದಿರೇ, ನಿನ್ನಂಥ ಐವತ್ತಾರು ತರುಣಿಯರು ಕೈಯಲ್ಲಿ ಮಾಲೆಯನ್ನು ಹಿಡಕೊಂಡು ಬೆನ್ನುಹತ್ತಿ ದರೂ ರಾವಬಹಾದ್ದೂರರು ಹೊರಳಿ ನೋಡಲಿಕ್ಕಿಲ್ಲ, ತಿಳಿಯಿತೇನು?

ಇಂದಿರಾ—ಸುಡಗಾಡದ ದೆವ್ವ ಹತ್ತಲಿ ಅವನ ಬೆನ್ನು! ನಿಮ್ಮ ಕಮಲಾ ವತಿಯೊಬ್ಬಳನ್ನೇ ಅವನ ಬೆನ್ನು ಹಚ್ಚಿ ಬಹಳ ಪುಣ್ಯ ಕಟ್ಟಿಕೊಂಡಿರಿ. ಅಷ್ಟೇ ಸಾಕು! ಮಾಡಿದ್ದು ಮಾಡಿ ಹೋಯಿತು. ಮಾತಾಡುವಾಗಲಾದರೂ ಸ್ವಲ್ಪ ಜನರ ಅಂಜಿಕೆಯಿರಲಿ.

ರಮಾ—ಹೆದರಲಿಕ್ಕೆ ನಾನು ಯಾರಪ್ಪನದೇನು ಗಂಟು ತಿಂದಿಲ್ಲ. ಇಲ್ಲದ ಹೊತ್ತಿನಲ್ಲಿ ನಮ್ಮ ಬಡತನಕ್ಕೆ ಯಾರೂ ಏನೂ ಕೊಡುವದಿಲ್ಲ. ತಾನೆಟ್ಟಗಿದ್ದರೆ ಸುತ್ತಲೂ ಬರುವವರು ಬಹು ಮಂದಿ. ಜನರ ಹೆದರಿಕೆಯಂತೆ, ಜನರ ಹೆದ

ರಿಕೆ? ಹಾಗಿದ್ದರೆ ಲಗ್ನಕ್ಕೆ ಸಾವಿರಾರು ಜನರೇಕೆ ಬಂದಿದ್ದಾರೆ?

ಇಂದಿರಾ--ತಿನ್ನಲಿಕ್ಕೆ ಸಿಕ್ಕರೆ ಸಾವಿರ ಬಿಟ್ಟು ಹತ್ತುಸಾವಿರ ಜನರ ಬರುತ್ತಾರೆ. ಆದರೆ ಹಿಂದಿನಿಂದ ಹುಡುಗಾಟಿಕೆಮಾಡಲಿಕ್ಕೆ ಕಡಿಮೆಮಾಡುವದಿ

ಕಮಲಾವತಿ—ಇಂದೂ, ನಿನಗೆ ತಿಳಿದೂ ತಿಳಿದೂ ಇಷ್ಟೇಕೆ ವಿತಂ ವಾದವನ್ನು ಬೆಳಿಸುವಿ? ನಾನೇ ಸ್ವತಃ ರಾವಬಹಾದ್ದೂರರಿಗೆ ಮಾಲೆಯನ ಹಾಕಲಿಕ್ಕೆ ಸಿದ್ಧಳಾದಮೇಲೆ ಅದರಲ್ಲಿ ತಾಯಿಯ ದೋಷವಾದರೂ ಏನು?

ರಮಾ—ಕಮಲೇ, ನೀನೇ ಆಕೆಯ ಕಿವಿಯನ್ನು ಚೆನ್ನಾಗಿ ತಿರುವ ರಾವಬಹದ್ದೂರನ ಹೆಂಡತಿಗೆ, ರಾವಬಹದ್ದೂರನ ಅತ್ತೆಗೆ ಬುದ್ಧೀ ಕಲಿಸಲಿ ಬಂದಿದ್ದಾಳೆ ಜಾಣೆ.

ಇಂದಿರಾ—ರಮಾಬಾಯಿ ಸ್ವಲ್ಪ ಹೆಚ್ಚಿಗೆ ಮಾತಾಡಿದ್ದಕ್ಕೆ ಕ್ಷಮೆಯಿ ರಲಿ. ಕಮಲಕ್ಕಾ ಬರುತ್ತೇನೆ, ಈ ದೀನಗೆಳತಿಯನ್ನು ಮರೆಯಬೇಡ. (ಸತಿ ಸುಖದಾ ನಿಧಾನವು ಎಂಬ ಪದವನ್ನು ಹಾಡುತ್ತ ಹೊರಟು ಹೋಗುವಳ ಕಮಲಾವತಿಯು ಅಳಹತ್ತುವಳು.)

ರಮಾ—ಕಮಲೇ, ನಿನಗೂ ಹುಚ್ಚು ಹಿಡಿಯಿತೇನು? ಏಳೇಳು ಜ ತಿರುಗಿದರೂ ರಾವಬಹದ್ದೂರರ ಉಗುರುಕಣ್ಣು ಸಹ ದೃಷ್ಟಿಗೆ ಬೀಳಲಿಕ್ಕಿ ಏನೋ ಗುರು-ಹಿರಿಯರ ಪುಣ್ಯವು ಹೆಚ್ಚಿಗಿತ್ತೆಂದು ತಿಳಿದು ಅವರು ನಿನ್ನ ಹಿಡಿದಿರುವರು. ನಿಜವಾಗಿ ನನ್ನ ಮಗಳು ಭಾಗ್ಯವಂತಿ! ನನ್ನ ಮುದ್ದುಕಂ ರಾವಬಹದ್ದೂರನ ಹೆಂಡತಿ! (ಮುದ್ದುಕೊಡುವಳು) ಮಗಳೇ, ಇನ್ನು ಮೊದ ನಂತೆ ಮಾಡಬೇಡ. ಸ್ವಲ್ಪ ಹಿಕ್ಕಿ ಹೆರಳು ಹಾಕುತ್ತೇನೆ. ಬಾ, ರಾವಬಹದ್ ರರು ಬಂದರೆ ಏನೆಂದಾರು?

ಕಮಲಾ—ಅವ್ವಾ ಸುಮ್ಮನೆ ಇಲ್ಲದ್ದೊಂದು ಬಡಬಡಿಸಿ ಸಂತಾಪವನ ಹುಟ್ಟಿಸಬೇಡ. ನನಗೆಲ್ಲ ತಿಳಿಯುತ್ತದೆ.

ರಮಾ—ಹೌದ ನಮ್ಮವ್ವ, ನೀನೆ ಪುಣ್ಯವಂತಿ! ಅಂತೇ ರಾವಬಹಾದ್ ರರ ಕೈಹಿಡಿದೆ! ಇಲ್ಲದಿದ್ದರೆ ನನ್ನಂಥ ಒಬ್ಬಳ ಪ್ರಯತ್ನದಿಂದ ಇಷ್ಟೆಲ್ಲ ಕೆಲಸವ ಗುವದು ಹೇಗೆ? ಸಾಕು ನಿನ್ನ ತಲೆಯ ಮೇಲೆ ಎರಡು ಅಕ್ಕೀಕಾಳು ಬಿದ್ದ ನ್ನು ನೋಡಿದೆನು.

ಕಮ--ಅವ್ವಾ, ನನ್ನ ಭಾಗ್ಯವು ಎಷ್ಟು ದೊಡ್ಡದೆಂಬದೂ ನಾನೆಷ ಪುಣ್ಯವತಿಯೆಂಬದೂ ನನಗೆ ತಿಳಿಯುತ್ತದೆ. ಅದನ್ನು ನೀನೇ ಹೇಳಬೇಕೆಂ

ಹಾಗೆ ಇಲ್ಲ. ನಿನ್ನ ಮನಸ್ಸು ಶಾಂತವಾಯಿತೋ ಇಲ್ಲವೋ? ಹೋಗು ಇನ್ನು ಸ್ವಸ್ಥ ಮಲಗು.

ರಮಾ—ಮಗಳೇ, ನಿನಗೆ ಇನ್ನೂ ಸ್ವಲ್ಪ ಶಾಂತಿಬರಲಿ, ದೇವರ ದಯೆಯಿಂದ ವರ್ಷ ತುಂಬುವದರೊಳಗೆ ಒಂದು ಪುತ್ಥಳಿಯಂಥ ಗಂಡುಮಗುವಾಯಿತೆಂದರೆ ಆ ಮೇಲೆ ನಿನ್ನ ತಾಯಿಯ ನೆನಪಾದರೂ ಆಗುವದೋ ಇಲ್ಲವೋ ಕಾಣೆ. ನೋಡಿದಿಯಾ? ಇನ್ನೂ ಲಗ್ನವಾಗಿ ಒಂದು ದಿವಸ ಸಹ ಆಗಿಲ್ಲ. ಆಗಲೇ ದೇಶಪರ್ಯಟನ ಮಾಡುವ ಭಾಗ್ಯವು ಬಂತು! ರಾವಬಹಾದ್ದೂರರು ನಾಳೆ ನಿನ್ನನ್ನು ವಿಲಾಯತಿಗೆ ಕರಕೊಂಡು ಹೋಗುವರಂತೆ! ಈಗ ರಾವಬಹಾದ್ದೂರರ ಸಿಪಾಯಿಗಳು ನಿರೋಪತಕ್ಕೊಂಡು ಬರಬಹುದು! ಅಗೋ ನೋಡು ಸ್ವತಃ ರಾವಬಹಾದ್ದೂರರೇ ಸಿಪಾಯಿಗಳನ್ನು ಕರಕೊಂಡು ಬಂದರು. ಬರಬೇಕು, ಬರಬೇಕು! ಏ ರಾಮ್ಯಾ ಖುರ್ಚಿ ತಂದು ಹಾಕು! ಅಯ್ಯೋ ಮರೆತೆ! ರಾವಬಹಾದ್ದೂರರೇ ಇನ್ನು ಈ ಮನೆಗೆ ತಕ್ಕಂತೆ ಮೇಜು ಖುರ್ಚಿ ವಗೈರೆ ಎಲ್ಲ ಸಾಮಾನು ಕಳಿಸಿ ಕೊಡಿರಿ. ಮತ್ತು ಇಲ್ಲಿಯೇ ನಿಮ್ಮ ಆಫೀಸು ಮಾಡಿರಿ.

ರಾ-ಬ—ಇರಲಿ ಇರಲಿ. ಖುರ್ಚಿ ಬೇಡ ಯಾವದೂ ಬೇಡ. ನಮ್ಮದೆಲ್ಲ ನಮಗೆ ತಿಳಿಯುತ್ತದೆ. ನೀವು ಮೊದಲು ಈ ಮನೆಬಿಟ್ಟು ಹೊರಬೀಳಿರಿ. ಇಲ್ಲದಿದ್ದರೆ ಗೊತ್ತದೆಯೋ ಇಲ್ಲವೋ?

ರಮಾ—ಅದೇಕೆ? ರಾವಬಹಾದ್ದೂರರೇ, ನಾನು ನಿಮ್ಮ ಅತ್ತೆಯಲ್ಲವೇ?

ಸಿಪಾಯಿ—ಅತ್ತೆಯಾದದ್ದಕ್ಕಾಗಿಯೇ ಅತ್ತ ಕಳಿಸುವದು.

ರಮಾ—ಸಿಪಾಯಿಗಳಿಗೆ ಸ್ವಲ್ಪ ಬಾಯಿ ಮುಚ್ಚಲಿಕ್ಕೆ ಹೇಳಿರಿ.

ರಾ-ಬ—ಮೊದಲು ನೀವು ಬಾಯಿ ಮುಚ್ಚಿಕೊಂಡು ಹೊರಬೀಳಿರಿ. ಮತ್ತು ಈಗ ನೀವು ಎಲ್ಲ ಸಾಮಾನುಗಳನ್ನು ತೆಗೆದು ಅವನ್ನು ಕಮಲೆಯ ವಶಕ್ಕೆ ಒಪ್ಪಿಸಿ ಹರಕ ಸೀರೆಯನ್ನುಟ್ಟುಕೊಂಡು ಹೊರಗೆ ಹೋಗಲಿಕ್ಕೆ ಬೇಕು.

ರಮಾ—ನಾನೇನು ಅಂಥ ಅಪರಾಧ ಮಾಡಿರುವೆನು?

ರಾ-ಬ—ದುಡ್ಡಿಗೂ ಸೊಬಗಿಗೂ ಮರುಳಾಗಿ ಹೊಟ್ಟೆಯ ಮಗಳನ್ನು ವಂಚಿಸುವದಕ್ಕಿಂತ ಹೆಚ್ಚಿನ ಅಪರಾಧವಾವುದು?

ರಮಾ—ತಮ್ಮ ಮಾತಿನಿಂದಲೇ ನಾನು ಇದನ್ನು ಮಾಡಲಿಲ್ಲವೇ?

ರಾ-ಬ—ಹೌದು ಶ್ರೀಮಂತರ ಕೆಲಸವೇ ಇದು. ಇಂಥ ಸಾವಿರಾರು ಬಡಜನರನ್ನು ಹಾಳು ಮಾಡಿದ ಮೇಲೇಯೇ ರಾವಬಹಾದ್ದೂರರಾಗುವದು.

ಅದಿರಲಿ. ನೀನು ಮೊದಲು ಹೊರಬೀಳು.

ರಮಾ—(ಅಳುತ್ತ)ರಾಯರೇ, ನಾನೆಲ್ಲಿ ಹೋಗಲಿ?

ರಾ-ಬ—ನಿನ್ನ ಮನಸ್ಸಿಗೆ ಬಂದಕಡೆಗೆ! ಬೇಕಾದರೆ ಸುಡುಗಾಡಿಗೆ ಹೋಗು! ದಾರಿಯನ್ನು ತೋರಿಸಲೇನು?

ರಮಾ—ಹೊಟ್ಟೆಗೇನು ತಿನ್ನಲಿ?

ರಾ-ಬ—ಮಣ್ಣು! ಬೇಕಾದರೆ ಸೆಗಣಿ!

ರಮಾ—ನಾನೇನು ಮಾಡಲಿ?

ರಾ-ಬ—ಬೇಕಾದ್ದು ಮಾಡು! ಮನಸ್ಸಿಗೆ ಬಂದರೆ ಜಾರಕರ್ಮಮಾಡು!

ರಮಾ—ಮಗಳೇ, ನೀನಾದರೂ ಸ್ವಲ್ಪ ನಿನ್ನ ಗಂಡನಿಗೆ ಹೇಳು.

ಕಮಲಾ—ಈ ಕೈಯಿಂದ ಮಾಡಿದ್ದನ್ನು ಈ ಕೈಯಿಂದ ಉಣ್ಣಬೇಕು.

ರಮಾ—ನಿನ್ನ ಸುಖದ ಸಲುವಾಗಿಯೇ ಇದನ್ನು ಮಾಡಿದೆನಲ್ಲವೇ?

ಕಮಲಾ—ಅದು ಪರಮಾತ್ಮನೊಬ್ಬನಿಗೇ ಗೊತ್ತು.

ರಮಾ—ಅಯ್ಯೋ! ಮಗಳೂ ಅಳಿಯನೂ ಕೂಡಿಯೇ ನನಗೆ ಎಂತಾದ ಕಲ್ಲಾ ಚು (ಎಂದು ಅಳುವಳು.)

ಸಿಪಾಯಿ—ಮೊದಲೇ ಇದು ತಿಳಿಯದೆ ಹೋತಲ್ಲಾ ಚು (ಎಂದು ಅಣಕಿಸುವನು.)

ರಮಾ—ರಾವಬಹಾದ್ದೂರರೇ, ನಿಮ್ಮ ಮನೆಯ ದಾಸಿಯಾಗಿರುತ್ತೇನೆ.

ರಾ-ಬ—ನಮ್ಮಲ್ಲಿ ಬೇಕಾದಷ್ಟು ದಾಸೀಜನರಿದ್ದಾರೆ. ನಿನ್ನಂಥ ಘಾತಕಿಯು ನೆರಳು ಸಹ ಬೇಡ ಹೊರಡು.

ರಮಾ—ನಿಮ್ಮ ದನಕರುಗಳ ಸೆಗಣಿ ಬಳಿದುಕೊಂಡಿರುತ್ತೇನೆ.

ರಾ-ಬ—ಅದಕ್ಕೂ ಜನರಿದ್ದಾರೆ. ನಮ್ಮ ಮನೆಯನ್ನೇ ಬಳಿದುಬಿಟ್ಟೇ ಹೊರಡು!

ರಮಾ—ನಿಮ್ಮ ಮನೆಯ ಅಗಸಗಿತ್ತಿಯಾಗಿರುತ್ತೇನೆ.

ರಾ-ಬ—ಬೇಡ ಬೇಡ. ಊರಲ್ಲಿರುವ ಅಗಸರ ಹೊಟ್ಟೆಯ ಮೇಲೆ ಕಾಲುಕೊಟ್ಟೇ ಹೊರಡು.

ರಮಾ—ಅಯ್ಯೋ ದೈವವೇ........

ಸಿಪಾಯಿ—ಯಾಕೆಬಾಯಿಸಾಹೇಬರೇ?ಚು

ರಮಾ—ಥೂ, ಸುಡುಗಾಡ್ಯಾ ಸುಮ್ಮನಿರು.

ರಾ. ಬಾ.—ಹಾ! ಬಾಯಿಬಿಗಿಹಿಡಿ, ಹೊರಡು ಮೊದಲು ಇಲ್ಲಿಂದ.

ರಮಾ—ಮೊದಲು ಇದು ನನಗೆ ತಿಳಿಯಲಿಲ್ಲವಲ್ಲ?

ಸಿಪಾಯಿ—ಆದಕ್ಕಂತೇ ಹೆಂಗಸರ ಬುದ್ಧಿ ಮೊಳಕಾಲ ಕೆಳಗೆ ಎಂದು ಹೇಳುವದು ಬಾಯಿ.

ರಮಾ—ಬಹಾದ್ದೂರರೇ,ಅಂತೂ ನನ್ನನ್ನು ಹೊರಗೆ ದೂಡುವದು ನಿಶ್ಚಯ!

ಸಿಪಾಯಿ—ಇನ್ನೂ ಸಂಶಯವೇನು ಮುದಿಬಾಯಿಯವರೇ?

ರಮಾ—ಥೂ! ಪುರುಷರ ಜಾತಿಯು ಬಹು ನೀಚವಾದದ್ದು.

ರಾ. ಬ.—ಅಂತೆಯೇ ನಿನ್ನನ್ನೀಗ ಹೊರದೂಡುವದು. ಹೂ ಹೊರಡು!

ರಮಾ—ನಾನು ಹೋಗುವದಿಲ್ಲ.

ರಾ. ಬ.—ಯಾಕೆ? ಪ್ರಾಮಿಸರಿನೋಟಿನ ಸಂಗತಿಯನ್ನು ಮರೆತೆಯೇನು?

ಕಮಲಾ—(ಆತ್ಮ) ಇದೇನಿದು ಕುತ್ರ್ಿ ಹೊಸದು?

ರಮಾ—ಅಯ್ಯೋ ನೀಚಾ, ಏನಾಯಕಾ............

ರಾ. ಬ.—ಹಾ! ಹೆಚ್ಚಿಗೆ ನಾಲಿಗೆಯನ್ನು ಹರಿಬಿಟ್ಟರೆ ತುರಂಗಕ್ಕೆ ಕಳಿಸೇನು ತಿಳಿಯಿತೇನು?

ರಮಾ—ಹು ಹು! ಪದ—ಝಂಪಾ.

ಕಡು ಪಾಪಿ ತವಜಾಲಕೊಳಗಾದೆ ನಾನಯ್ಯೊ | ಕೊಡದಿಹನೆ ಕಡು ತಾಪ ನಿನಗೆ ಯಮರಾಯ || ನಿನ್ನ ಆ ಸವಿ ವಚನವನ್ನು ಕೇಳುತಲೆನ್ನ | ಚೆನ್ನ ತನುಜೆಯ ಸುಖವ | ಮಣ್ಣುಗೈದಿಹೆನಯ್ಯೋ || ೧ ||

ರಾ. ಬ.—ಎಲೋ ಸಿಪಾಯಿಗಳೇ, ಈಕೆಯನ್ನು ಒಳಗೆ ಜಗ್ಗಿಕೊಂಡು ಹೋಗಿ ಮೈಮೇಲಿನ ಅರಿವೆಗಳನ್ನೆಲ್ಲ ಕಸಿದುಕೊಂಡು ಹೊರದೂಡಿ ಬಿಡಿರಿ.

ರಮಾ—ಥೂ ಮೂರ್ಖ ನಿನ್ನ ಬಾಸಿಂಗಕ್ಕೆ ಬೆಂಕಿ ಹತ್ತಲಿ! ಹಾಳಾಗಿ ಹೋಗು! (ಸಿಪಾಯಿಗಳು ಎಳೆಯುವರು)

ರಾ. ಬ.—ಹೋಗು ಹೋಗು ನಾಯಿಾ, ಕಾಗೆಯ ಶಾಪದಿಂದ ದೊಂಬನೇನು ಸಾಯುವದಿಲ್ಲ. ಕಮಲಾವತೀ, ಬಾ ಹೀಗೆ.

ಕಮ—ನನ್ನ ಕಿವಿಗಳೇನು ವಯಸ್ಸಾಗಿ ಕಿವುಡಾಗಿಲ್ಲ. ಎನಿದ್ದರೂ ಕೇಳುತ್ತೇನೆ. ಅಲ್ಲಿಂದಲೇ ಹೇಳಿರಿ.

ರಾ. ಬ.—ಕಮಲೇ, ವಿಶ್ರಾಂತಿಗಾಗಿ ಸ್ವಲ್ಪ ದಿವಸ ಕಲಕತ್ತೆಗೆ ಹೋಗ ಬೇಕೆಂದಿದ್ದೇನೆ.

ಕಮಲಾ—ಹೋಗಬಹುದು. ತಮಗೆ ಎಲ್ಲ ಅನುಕೂಲತೆಯೂ ಅದೆ.

ರಾ. ಬ.—ಸಂಗಡ ನೀನೂ ಬರಬೇಕು. ನಿನಗೂ ಸ್ವಲ್ಪ ವಿರಾಮ ವೆನಿಸುವದು.

ಕಮಲಾ—ನನಗೆ ವಿರಾಮವು ಈ ಜನ್ಮದಲ್ಲಿಯೆಂದೂ ಸಿಗಲಾರದು. ಆದರೆ ಪತ್ನೀ ಧರ್ಮಕ್ಕನುಸರಿಸಿ ತಮ್ಮ ಅಪ್ಪಣೆಯನ್ನು ಮನ್ನಿಸಬೇಕಾಗುವದು.

ರಾ. ಬ.—ಅಲ್ಲಿಯೂ ಸಾಹೇಬ-ಮಡಮ ಜನರು ಬಹಳವಾಗಿರುವರು.

ಕಮಲಾ—ಇಡೀ ಹಿಂದುಸ್ಥಾನವೇ ಅವರದಾಗಿರುವಾಗ ಇರಲಿಕ್ಕೆ ಅಡ್ಡೀ ಮಾಡುವವರು ಯಾರು?

ರಾವ ಬ.—ಹಾಗಲ್ಲ ಕಮಲೇ, ಅವರು ಬಂದರೆಂದೇ ಈ ದೇಶದಲ್ಲಿ ಸುಖಶಾಂತಿಗಳು ನೆಲೆಗೊಂಡಿವೆ. ಮೊದಲು ನಿನ್ನಂಥ ರೂಪವತಿಯಾದ ಹೆಂಡತಿ ಯನ್ನು ಕಟ್ಟಿಕೊಂಡು ಬಾಳ್ವೆ ಮಾಡುವದು ಬಹು ಕಠಿಣವಾಗಿತ್ತು.

ಕಮಲಾ—ಈ ಧೈರ್ಯದಿಂದಲೇ ಮುದುಕರಿಗೆ ಹರೆಯದ ಹೆಂಡಿರನ್ನು ಮಾಡಿಕೊಳ್ಳುವ ದುರ್ಬುದ್ಧಿಯುಂಟಾಯಿತು.

ರಾವ—ನಮ್ಮ ಜನರು ಮೊದಲು ಬಹು ಕಾಡುಸ್ಥಿತಿಯಲ್ಲಿದ್ದರು.

ಕಮಲಾ—ಆಗ ನಿಮ್ಮ ಸಾಹೇಬರು ವನಚರರಂತೆ ಬತ್ತಲೆ ತಿರುಗು ತ್ತಿದ್ದರು.

ರಾವ—ನಮ್ಮ ಜನರಲ್ಲಿ ಸಂಘಶಕ್ತಿಯಿದ್ದಿದ್ದಿಲ್ಲ.

ಕಮಲಾ—ಅದಕ್ಕಾಗಿಯೇ ಈಗಲೂ ಇರಬಾರದೆಂದು ಭೇದತಂತ್ರವನ್ನು ನಡೆಯಿಸುತ್ತಿರುವರು.

ರಾವ—ನಮ್ಮ ರಾಜರು ತಮ್ಮ ಸುಖಕ್ಕಾಗಿ ಪ್ರಜೆಗಳನ್ನು ಬಹು ಪೀಡಿ ಸುತ್ತಿದ್ದರು.

ಕಮಲಾ—ಹೌದು. ಪ್ರಜೆಗಳ ಸುಖಕ್ಕಾಗಿಯೇ ವಾರನ್‌ಹೇಸ್ಟಿಂಗ್ಸನು ಕಾಶಿಯ ಚೈತಸಿಂಗನನ್ನೂ, ಅಯೋಧ್ಯೆಯ ಬೇಗಮನನ್ನೂ ಸುಲಿದನು. ಡಾಲ ಹೌಸಿಯು ಎಲ್ಲ ಸಂಸ್ಥಾನಗಳನ್ನು ಮಣ್ಣುಗೂಡಿಸಿದನು. ಡಾಯರ ಸಾಹೇ ಬರು ಮನುಷ್ಯರ ಬೇಟೆಯಾಡಿದರು. ಈಗಲೂ ಸಹ ಪ್ರಜಾಹಿತಕ್ಕಾಗಿಯೇ ಎಷ್ಟೋ ಸಂಸ್ಥಾನಿಕರನ್ನು ಪದಚ್ಯುತ ಮಾಡುತ್ತಿರುವರು.

ರಾವ ಬಹಾ—ನಮ್ಮ ಜನರಲ್ಲಿ ಸ್ವದೇಶಾಭಿಮಾನವಿದ್ದಿಲ್ಲ,

ಕಮಲಾ—ಹೌದು. ಅದಕ್ಕಾಗಿಯೇ ರಾಣಾ ಪ್ರತಾಪಸಿಂಹನು ಕಡೆಯ ವರೆಗೂ ಬಂಗಾರದ ತಾಟಿನಲ್ಲಿ ಉಣ್ಣಲಿಲ್ಲ. ಮೇಲಿಂದ ಮೇಲೆ ಜೋಹಾರ ಮಾಡುತ್ತಿದ್ದ ರಜಪೂತರಲ್ಲಿ ಸ್ವಾಭಿಮಾನವೆಲ್ಲಿತ್ತು?

ರಾ. ಬ.—ನಮ್ಮಲ್ಲಿ ಶೌರ್ಯ ಧೈರ್ಯಗಳಿದ್ದಿಲ್ಲ.

ಕಮಲಾ—ಹೌದು. ಜಗತ್ತನ್ನೇ ಗೆದ್ದು ಇಂಗ್ಲಂಡ ಮೊದಲಾದವುಗಳನ್ನು ನೆಲಸಮ ಮಾಡಿದ ಶಿಕಂದರಬಾದಶಹನು ಹಿಂದುಸ್ತಾನಕ್ಕೆ ಕಾಲಿಟ್ಟಾಗ ಒಂದು ಮೂಲೆಯಲ್ಲಿದ್ದ ಪೋರಸನೆಂಬ ಅರಸನು ಅವನನ್ನು ಹಣ್ಣುಗಾಯಿ ನೀರುಗಾಯಿ ಮಾಡಿದನು. ಕರ್ನಾಟಕದ ಕೊನೆಯ ಹುಲಿಯಾದ ಟೀಪೂಸುಲ್ತಾನನ ಹೆಸರನ್ನು ಕೇಳಿದರೆ ನಿಮ್ಮ ಸಾಹೇಬ ಜನರು ಅಬ್ಬರಿಸಿ ಬೀಳುತ್ತಿದ್ದರು.

ರಾ-ಬ—ನಮ್ಮಲ್ಲಿ ಶ್ರೇಷ್ಠ ಕವಿಗಳಿದ್ದಿಲ್ಲ.

ಕಮಲಾ—ಹೌದು. ಅದಕ್ಕಾಗಿಯೇ ಕಾಳಿದಾಸಕವಿಯ ಶಾಕುಂತಲವನ್ನು ಹೊತ್ತುಕೊಂಡು ಕುಣಿಯುತ್ತಿರುವರು.

ರಾ-ಬ—ಈಗಿನಂತೆ ವಿಮಾನ, ಉಗಿಬಂಡಿ ಮೊದಲಾದ ಯಂತ್ರಸಾಧನಗಳಿದ್ದಿಲ್ಲ.

ಕಮಲಾ—ಅದು ನಿಮ್ಮ ತಪ್ಪುತಿಳುವಳಿಕೆ. ವಿಮಾನದಲ್ಲಿ ಕುಳಿತು ಯುದ್ಧ ಮಾಡುತ್ತಿದ್ದರಲ್ಲದೆ ದೇವಲೋಕಕ್ಕೆ ಸಹ ಹೋಗಿ ಬರುತ್ತಿದ್ದರು. ದ್ರೌಪದೀವಸ್ತ್ರಾಹರಣದ ಕಾಲಕ್ಕೆ 'ಅಣ್ಣಾ' ಎಂಬ ಕೂಡಲೆ ಕೃಷ್ಣ ಪರಮಾತ್ಮನು ಬಂದು ನಿಲ್ಲಲಿಕ್ಕೆ ನಿಮ್ಮ ವಾಯರಲೆಸ್ ಟೆಲಿಗ್ರಾಫ ತೆಗೆದುಕೊಂಡು ಹೋಗಿದ್ದರೇನು? ಅದು ತಂತಿಯಿಲ್ಲದ ತಾರಾಯಂತ್ರವಲ್ಲದೆ ಮತ್ತೇನು? ಅಮೇರಿಕೆಯನ್ನು ಹೊಸದಾಗಿ ಗೊತ್ತುಹಚ್ಚಿದೆವೆಂದು ಜಂಭ ಬಡಿಯುವ ಸಾಹೇಬಜನರಿಗಿಂತಲೂ ಮೊದಲೇ ಪಾಂಡವಾದಿಗಳ ಕಾಲದಲ್ಲಿ ನಾಗಕನ್ನಿಕೆಯರೊಡನೆ ವಿವಾಹವಾಗಿದ್ದಿಲ್ಲವೇ? ಈಗ ನಿಮ್ಮ ಸಾಹೇಬ ಜನರನ್ನು ಮೀರಿ ಯಂತ್ರಗಳನ್ನು ತಯಾರಿಸುವ ಕುಶಾಗ್ರಬುದ್ಧಿಯುಳ್ಳವರಿದ್ದಾರೆ. ಆದರೆ ಅದಕ್ಕೆ ರಾಜಾಶ್ರಯವಿಲ್ಲ.

ರಾ-ಬ—ಹೋಗಲಿಬಿಡು. ಆ ಹಾಳುರಗಳೆಯನ್ನು ತಕ್ಕೊಂಡು ನಾವೇನು ಮಾಡಬೇಕಾಗಿದೆ. ಯಾರು ಸತ್ತರೇನು ಯಾರು ಇದ್ದರೇನು? ನಾವಷ್ಟು ಸುಖದಿಂದಿದ್ದರಾಯಿತು.

ಕಮಲಾ—ಅಹುದಹುದು. ಜೇನಹುಟ್ಟನ್ನೇ ಬೇಡನು ಕತ್ತರಿಸಲಿಕ್ಕೆ ಬಂದಾಗ ನಮ್ಮ ಕಷ್ಟಕ್ಕೆ ನಾವು ಬಡಿದಾಡಿದರೂ ಅಷ್ಟೇ, ಸುಮ್ಮನಿದ್ದರೂ ಅಷ್ಟೇ. ಬೇಡನು ಹುಟ್ಟು ಕೊಯ್ದೇ ಕೊಯ್ಯುವನು. ಅದೇ ಒಟ್ಟಾಗಿ ಎಲ್ಲರೂ ಅವನ ಬೆನ್ನು ಹತ್ತಿದರೆ ಮಾತ್ರ ಸುಖಸ್ವಾಸ್ಥ್ಯಗಳನ್ನು ಅನುಭೋಗಿಸಲಿಕ್ಕೆ ಬರುವದು. ನಿಮ್ಮಂಥವರಿಗೇ ಪರಹಿತಬುದ್ಧಿಯಿಲ್ಲವೆಂದ ಮೇಲೆ ಪಾಪ ಬಡವರೇನು ಮಾಡಬೇಕು?

ರಾ-ಬ—ಇರಲಿ ನಡೆ. ಆ ಜರೀಸೀರೆಯನ್ನುಟ್ಟುಕೊಂಡು ಸಿದ್ಧಳಾಗು. ಗಾಡಿಗೆ ವೇಳೆಯಾಗುವದು.

ಕಮಲಾ—ನನಗೆ ಅದು ಬೇಡ. ಈ ದೇಶೀಯ ಸೀರೆಯೇ ಸಾಕು. ಹೀಗೆ ಮಾಡಿಮಾಡಿಯೇ ನಮ್ಮಲ್ಲಿ ನೇಯುವ ಕಲೆಯು ಹೋದದ್ದಲ್ಲದೆ ನೇಕಾರರು ಅನ್ನನ್ನವೆಂದು ಕುಳಿತಿರುವರು. ಮನುಷ್ಯನಾದ ಮೇಲೆ ತನ್ನಂತೆ ಪರರನ್ನು ನೋಡಬೇಕು. ಜರತಾರೀ ವಸ್ತ್ರಗಳಿಂದೇನೂ ಮಾನಮರ್ಯಾದೆ ಬರುವದಿಲ್ಲ. ಪರಪುರುಷರನ್ನು ವಂಚಿಸಿ ತಮ್ಮ ಬಲೆಯಲ್ಲೊಳಕೊಳ್ಳುವ ಬಾಜಾರ ಬಸಿವೆಯರಿಗೆ ಮಾತ್ರ ಆಭರಣ ಅರಿವೆಗಳ ಪರಿವೆ. ಆಹಾರವಿಹಾರಗಳು ಸಾದಾ ಇರಬೇಕು, ಆಚಾರಗಳು ಮಾತ್ರ ಉಚ್ಚವಾಗಿರಬೇಕು. ಈಗ ಕಲಕತ್ತೆಗೆ ಹೋಗುವದನ್ನು ನಿಲ್ಲಿಸಿದರೆ ನಡೆಯಲಿಕ್ಕಿಲ್ಲವೇನು?

ವಿನಾಯಕ—ಹಾಗೇ ಆಗಲಿ.

ಸಿಪಾಯಿ—ಧನಿಯರೇ ತಾವು ಹೇಳಿದಂತೆ ಎಲ್ಲ ವ್ಯವಸ್ಥೆ ಮಾಡಿ ರಮಾಬಾಯಿಯನ್ನು ದೂಡಿ ಬಂದೆವು.

ಕಮಲಾ—ಪದ—ತಾನುಗೈದ ಕರ್ಮವೆ ತಾನು ಎಂಬಂತೆ.

ಬೇವುಬಿತ್ತಿ ಮಾವಿನಫಲವನಾವನವನಿಯೊಳು | ತಾನುಪಡೆದ ಪೇಳು || ಪಲ್ಲ ||
ಪರರಮುಖಕೆ ಕರಿಕವ ಬಳಿವ | ಕರವೆಮೊದಲು ಕರಿದಾಗುವದು |
ಅಂತು ತತ್ವವಿದಕೇ ಮನುಜ ತೊರೆಯೊ ಕುಮತಿಯೊಗ || ೧ ||
ಮುನ್ನಕುನ್ನಿ ಕುರು ರಾವಣರು | ಚೆನ್ನ ಪಾಂಡು ರಾಘವರನ್ನು |
ಬನ್ನಗೊಳಿಸಲೆಳಸುತೆ ತಾವೇ | ಬನ್ನಬಟ್ಟರಲ್ಲೆ || ೨ ||

———

# ೫ನೆಯ ಪ್ರವೇಶ.

ಸ್ಥಳ—ರಸ್ತೆ. ರಮಾಬಾಯಿಯು ಜೋಗಿಣಿಯಾಗಿ ಬರುವಳು.

ರಮಾ--ಪದ(ದುಗ್ಗಾಣಿ ಬಲುಕೆಟ್ಟದಣ್ಣಾ ಎಂಬ ದಾಸರಪದವನ್ನುಹಾಡುವಳು)

ಜಯ! ಸಚ್ಚಿದಾನಂದ ಪರಬ್ರಹ್ಮಣೇನಮಃ! ಜಗದೀಶಾ, ಗೋಪಾಲ ಕೃಷ್ಣ, ನಿನ್ನ ಉಪಕಾರಗಳನ್ನು ಎಷ್ಟೆಂದು ನೆನೆಸಲಿ? ಒಳ್ಳೇ ಹೊತ್ತಿಗೆ ನನಗೆ ಜ್ಞಾನದಾನ ಮಾಡಿ ಯೋಗ್ಯ ಹಾದಿಯನ್ನು ತೋರಿಸಿದೆ. ನನ್ನಂಥ ನರಾಧಮ ಳಿಗೆ ನರಕವಾಸವೇ ಯೋಗ್ಯವಾದದ್ದು! ಅಯ್ಯೋ ಧನವೇ? ನಿನ್ನಿಂದ ಈ ಜಗ ತ್ತಿನಲ್ಲಿ ಎಷ್ಟು ಅನರ್ಥಗಳಾಗಿವೆಯೆಂಬದನ್ನು ತಿಳಿದೂ ತಿಳಿದೂ ಎಂಥ ಪಾತಕ ವನ್ನು ಮಾಡಿದೆನಲ್ಲಾ! ಸಂಸಾರರಥವು ಸರಿಯಾಗಿ ನಡೆಯಬೇಕಾದರೆ ಸ್ತ್ರೀ ಪುರುಷರೆಂಬ ಎರಡು ಗಾಲಿಗಳೂ ಸರಿಯಾಗಿ ರಾಗದಿಂದಿರಬೇಕಾಗುತ್ತದೆ. ಪ್ರಭುವು, ಪ್ರೇಮಮಯನಾಗಿದ್ದಾನೆ. ಸಂಸಾರಕ್ಕಂತೂ ಪ್ರೇಮವೇ ಮೂಲಾಧಾರ. ಈ ಸಂಸಾರ ಮಂದಿರಕ್ಕೆ ಸ್ತ್ರೀ ಪುರುಷರೇ ಸ್ತಂಭಗಳು. ಅವು ಪ್ರೇಮದಿಂದ ಬದ್ಧವಾಗಿರಬೇಕು. ಆದರೆ ಈ ಪ್ರೇಮದಲ್ಲಿ ನಿಷ್ಕಾಮವಾದ ಪಾರತ್ರಿಕಪ್ರೇಮವು ಐಹಿಕ ವಿಷಯವಾಸನಾ ಮೂಲಕವಾದ ಪ್ರೇಮಕ್ಕಿಂತ ಶತಪಟ್ಟು ಶ್ರೇಷ್ಠವೂ, ಮೋಕ್ಷದಾಯಕವೂ ಆಗಿರುವದು. ಆ ವೇಣುಗೋಪಾ ಲನಲ್ಲಿರುವ ನಿರ್ಮಲಪ್ರೇಮಕ್ಕಾಗಿಯೇ ೧೬೦೦೦ ಗೋಪಿಕಾ ಸ್ತ್ರೀಯರು ಜೀವ ನ್ಮುಕ್ತರಾದರು. ಆದರೆ ಈಗ ವಿಷಯಪ್ರೇಮವೇ ಇಂದ್ರಿಯ ತೃಪ್ತಿಯೇ ಮುಖ್ಯವಾಗಿದೆ. ಮುದುಕರು, ಹರಿ ಹರಿಯೆಂದು ಕಾಲಕಳೆದು ಸ್ಮಶಾನಯಾ ತ್ರೆಗೆ ಹೊರಡಬೇಕಾದ ಮುದಿಹದ್ದುಗಳು ಹರೆಯದ ಹುಡುಗೆಯರನ್ನು ಬಯ ಸುವದೆಂದರೇನು? ಹಳೆಯದಕ್ಕೂ ಎಳೆಯದಕ್ಕೂ ಹೇಗೆ ಕೂಡುವದು? ಆದರೆ ಧನಪಿಶಾಚಿಯು ಮಧ್ಯಸ್ಥಳಾಗಿ ಬಂದು ಬಿಟ್ಟರೆ ಎಲ್ಲವೂ ಸರಿಯಾಗಿ ಹೋಗು ವದು. ಆದರೆ ಅದು ಪಿಶಾಚ ಸಾಮ್ರಾಜ್ಯ! ಸೈತಾನನ ಸೆಳೆದಾಟ! ಅಯ್ಯೋ ಈ ದುಡ್ಡಿಗೆ ಮರುಳಾಗಿ ನನ್ನ ಮೋಹದ ಮಗಳ ಕುತ್ತಿಗೆಯನ್ನು ಕರಕರನೆ ಕೊಯ್ದ ನನ್ನ ಜನ್ಮಕ್ಕೆ ಧಿಕ್ಕಾರವಿರಲಿ! ಆಹಾ! ಯೌವನವತಿಯಾದ ನನ್ನ ಮಗಳು ಆ ಮುದಿಹದ್ದಿನೊಡನೆ ಹೇಗೆ ಬಾಳ್ವೆ ಮಾಡುವಳು! ನಾನೇ ನನ್ನ ಮಗ ಳಿಗೆ ದುರ್ಮಾರ್ಗವನ್ನು ಹಿಡಿಸಿದೆನಲ್ಲ! ಕಡೆಗಾದರೂ ಆ ದುಡ್ಡು ಎಲ್ಲುಳಿಯಿತು? ಶ್ರೀಮಂತರು ಬಡವರಿಗೆ ಹಾಕುವ ಪಾಶಗಳನ್ನು ಅಷ್ಟಿಷ್ಟೆಂದು ಹೇಳಲಾಗುವ

ದಿಲ್ಲ. ನನ್ನ ಮಗಳು ಇನ್ನು ಹೇಗೆ ಕಾಲ ಕಳೆಯುವಳೋ! ಪರಮಾತ್ಮಾ, ನನ್ನ ಅಪರಾಧದಿಂದ ಪಡಬೇಕಾದ ಕಷ್ಟಗಳನ್ನೆಲ್ಲ ನನಗೇ ಕೊಟ್ಟು ನನ್ನ ಕಂದಮ್ಮನಿಗೆ ಸರ್ವ ಸುಖಗಳನ್ನು ಕೊಡು. ಇಷ್ಟೇ ನಿನ್ನಲ್ಲಿ ಬೇಡಿಕೆ. ಸ್ವಲ್ಪ ಇಲ್ಲಿಯೇ ವಿಶ್ರಮಿಸಿ ಮುಂದೆ ಹೋಗುವೆನು. (ಏಕದಿನಜಾನಾರೆಭಾಯಿ ಎಂಬ ಪದವನ್ನು ಹೇಳುವಳು.)

ವಿಶ್ವಾಸರಾವ—(ಪ್ರವೇಶಿಸಿ ನೋಡಿ) ಇವರು ಯಾರು ಜೋಗತಿ! ಓಹೋ! ಇವರು ಅಂದು ಸೋಗುಮಾಡುತ್ತ ಮೂಗು ಮುರಿಯುತ್ತ ಮೆರೆದ ರಾವಬಹಾದ್ದೂರನ-ಆ ಮುದಿ ಅಳಿಯನ-ಅತ್ತೆಯವರು. ಇವರಿಗೆ ಇಂಥ ದಶೆಯು ಹೇಗೆ ಬಂದಿತು? ಸ್ವಲ್ಪ ಇವರನ್ನು ವಿಚಾರಿಸೋಣ. (ಮುಂದೆ ಹೋಗಿ) ಏನು ಬಾಯಿಯವರೇ?

ರಮಾ—ಜಯ! ಸಚ್ಚಿದಾನಂದ!!

ವಿಶ್ವಾಸ—ಅಬ್ಬಬ್ಬ! ನಿಮ್ಮ ರಾವಬಹಾದ್ದೂರ ಅಳಿಯಂದಿರೆಲ್ಲಿ?

ರಮಾ—ಶ್ರೀಹರಿ!

ವಿಶ್ವಾಸ—ನಿಮ್ಮ ಮಗಳೆಲ್ಲಿ?

ರಮಾ—ಶ್ರೀಹರಿ!

ವಿಶ್ವಾಸ—ಯಾಕೆ? ಮಾಡಿದಪಾಪವನ್ನು ಬಾಯಿಂದ ಹೇಳುವದಕ್ಕೆ ನಾಚುವಿರಿ? ನಿಮ್ಮ ಸ್ಥಿತಿಯನ್ನು ನೀವೇ ಮುಚ್ಚಿಕೊಂಡು ಹೋದರೆ ಹೇಗೆ? ಇದ್ದದ್ದನ್ನು ಬಿಚ್ಚಿ ಹೇಳಿರಿ. ತಿಳಿಗೇಡಿಗಳು ನಿಮ್ಮ ಜನ್ಮಕಥೆಯನ್ನು ಕೇಳಿ ಬುದ್ಧಿಗಲಿಯುವರು.

ರಮಾ—ಶ್ರೀಹರಿ! ಏನು ಹೇಳಲಿ? ನಾನು ಸುಮ್ಮನಿದ್ದರೂ ವಾಯುವು ಸುಳ್ಳನೆ ಸುಳಿದು ನನ್ನ ಪಾಪವನ್ನು ಕಿವಿಯಲ್ಲಿ ಹೇಳುತ್ತಿರುವದು. ಹಕ್ಕಿಪಕ್ಕಿಗಳ ಕಿಲಿಬಿಲಿಯಲ್ಲಿಯೂ ನನ್ನ ಪಾಪದ ಕಥೆಯೇ ಕೇಳುವದು. ಮೇಲೆ ನೋಡಿದಕೂಡಲೆ ಯಮದೂತರು ಸಾವಿರಾರು ಬರ್ಚಿಗಳನ್ನು ಎತ್ತಿಕೊಂಡು ನನ್ನ ಕಡೆಗೆ ಧಾವಿಸಿ ಬರುವಂತೆ ತೋರುತ್ತಿರುವದು. ಕೆಳಗೆ ನೋಡಿದ ಕೂಡಲೆ ಪಾತಾಳಲೋಕದಿಂದ ಸರ್ಪಗಳು ಫೂತ್ಕರಿಸುತ್ತ ಬರುವಂತೆ ಭಾಸವಾಗುತ್ತದೆ. ಅನ್ನವನ್ನು ಕೈಯಲ್ಲಿ ಹಿಡಿದರೆ ನರಕವೆಂದು ನೆನಪಾಗುತ್ತದೆ. ಆದರೆ ಪಾಪಿಯಾದ ನನ್ನನ್ನು ಮುಟ್ಟಲು ಹೇಸಿ, ದೂರ ಸರಿಯುತ್ತಿರುವದರಿಂದ ಈ ಚಾಂಡಾಲಿನಿಗೆ ಇನ್ನೂ ಮರಣವು ಬರಲೊಲ್ಲದು! ಏನು ಹೇಳಲಿ ಜಯ! ಸಚ್ಚಿದಾನಂದ!!

ವಿಶ್ವಾಸ—ಬಾಯಿಯವರೇ, ಮುದುಕನಿಗೆ ಮಗಳನ್ನು ಕೊಡುವಾಗ ನೀವು ಮಾಡಿದ ಪಾಪಗಳೆಲ್ಲ ನಿಮ್ಮ ಲಕ್ಷ್ಯದಲ್ಲಿ ಬರುತ್ತವೇನು!

ರಮಾ—ಸಚ್ಚಿದಾನಂದ ಶ್ರೀಹರೀ! ಮಾಡಿದ್ದನ್ನು ಮರೆಯುವದು ಹೇಗೆ? ಆ ನನ್ನ ಕೋಮಲ ಸುಶೀಲ ಬಾಲಿಕೆಯನ್ನು ಅನುರೂಪವರನಿಗೆ ಕೊಟ್ಟಿದ್ದರೆ, ದುಷ್ಕರ ಗಂಟಲಗಾಣವಾಗುವ ಮಗನನ್ನು ಹೆತ್ತು ದೇಶೋದ್ಧಾರ ಮಾಡಿಸುತ್ತಿದ್ದಳು. ಈಗ ನನ್ನ ಮಗಳು ಕಂಡೂ ಕಂಡೂ ಅಪುತ್ರವತಿಯಾಗಬೇಕಾಯಿತು, ಸಂತಾನೇಚ್ಛೆಯಿದ್ದರೆ ವ್ಯಭಿಚಾರ ಮಾಡಬೇಕಾಗುವದು. ಆದರೆ ಇದರಲ್ಲಿ ನನ್ನಂಥಹ ಅಜ್ಞಹೆಂಗಸು ಜಾರಿಬಿದ್ದದ್ದಕ್ಕಿಂತಲೂ ಗಂಡಸೆಂದು ಮೀಸೆ ಹೊತ್ತ ಆ ರಾವಬಹಾದ್ದೂರನು ಜಾರಿಬಿದ್ದದ್ದು ಆಶ್ಚರ್ಯವಲ್ಲವೇ! ನಿಜ ನಿಜ! ದುಡ್ಡಿಗೂ ದಡ್ಡತನಕ್ಕೂ ಗಂಟು! ಬರೇ ಶ್ರೀಮಂತರಾದ ಮಾತ್ರದಿಂದಲೇ ಜಾಣತನವೆಲ್ಲಿಂದ ಬರಬೇಕು, ಅದನ್ನು ತಾನು ದೊರಕಿಸಬೇಕಾಗುತ್ತದೆ. ಇಂಥ ಶ್ರೀಮಂತರೇ ಇಲ್ಲದ್ದೊಂದು ಜಾಲಹಾಕಿ ಬಡವರನ್ನು ಹಾಳು ಮಾಡುವರು.

ವಿಶ್ವಾಸ—ಬಾಯಿಯವರೇ ಸುಮ್ಮನೆ ಬಡಬಡಿಸಿದರೆ ಆಗುವದೇನು? ನೀವು ಇದೇ ವೇಷದಲ್ಲಿ ಎಲ್ಲ ಕಡೆಗೂ ತಿರುಗುತ್ತ, ನಿಮ್ಮ ಅವಸ್ಥೆಯನ್ನು ಹೇಳಿ ಹೆಣ್ಣಿನ ತೆರವನ್ನು ತಕ್ಕೊಳ್ಳದಂತೆಯೂ, ಮುದುಕರಿಗೆ ಕನ್ಯೆಯರನ್ನು ಕೊಡದಂತೆಯೂ ಉಪದೇಶಮಾಡುತ್ತ ಹೋಗಿರಿ.

ರಮಾ—ಜಯ! ಸಚ್ಚಿದಾನಂದ. ಹಾಗೇ ಆಗಲಿ!

ವಿಶ್ವಾಸ—ನೋಡಿದಿರಾ, ದುಡ್ಡಿನ ಪರಿಣಾಮವನ್ನು! ಈ ತೆರದಂತೆಯೇ ವರದಕ್ಷಿಣೆಯೆಂಬದೂ ಸಮಾಜದಲ್ಲಿ ರಾಕ್ಷಸನಂತೆಯೇ ಹಾವಳಿಮಾಡುತ್ತದೆ. ಇದರಿಂದಲೇ ಎಷ್ಟೋ ಮನೆಗಳು ನೆಲಸಮವಾಗಿವೆ. ಎಷ್ಟೋಜನ ತರುಣಿಯರು ತಮ್ಮ ದೇಹಕ್ಕೆ ಬೆಂಕಿಹಚ್ಚಿಕೊಂಡು, ಮದಾಂಧರಾದ ಜನರ ಕಣ್ಣಿನ ಮಬ್ಬನ್ನು ಹರಿಸಿರುವರು. ಅದರಂತೆ ದುಡ್ಡಿನ ಮಬ್ಬಿನಿಂದ ಕೊಬ್ಬಿದ ಈ ಶ್ರೀಮಂತರು ಯುವತಿಯರನ್ನು ಜೀವಂತ ಸುಡುತ್ತಿರುವರು. ಈ ಬಗೆಯ ದುರಾಚಾರಗಳಿಂದಲೂ, ಸ್ತ್ರೀಯರ ಶಾಪದಿಂದಲೂ ಹಿಂದುಸ್ಥಾನಕ್ಕೆ ಗಸಾತಳಿಕ್ಕೆಳಿಯ ಹತ್ತಿದೆ. ಆದ್ದರಿಂದ ಸಮಾಜಧುರೀಣರೆಲ್ಲರೂ ಇಂಥ ಅನ್ಯಾಯಗಳಾಗದಂತೆ ಶಕ್ಯವಿದ್ದಮಟ್ಟಿಗಾದರೂ ಪ್ರಯತ್ನಿಸಿ ದೇಶೋದ್ಧಾರವನ್ನು ಮಾಡಬೇಕೆಂದು ಬೇಡಿಕೊಳ್ಳುತ್ತೇನೆ. (ಹೋಗುತ್ತಾನೆ ಇಂದಿರೆಯು ಬರುವಳು)

ಇಂದಿರೆ—ಇವರು ಯಾರು? ರಮಾಬಾಯಿ? ಯಾಕೆ ಕಕ್ಕೀ ಹೀಗೇಕೆ ಜೋಗತಿಯರಾದಿರಿ?

ರಮಾ—ಜಯಸಚ್ಚಿದಾನಂದ!

ಇಂದಿರೆ—ಧನಾನಂದವು ಹೋಗಿ ಚಿದಾನಂದವೇಕೆ ಬಂತು? ಯಾಕೆ ಅಳಿಯನೂ ಮಗಳೂ ಹೊರಗೆ ಹಾಕಿದರೇನು?

ರಮಾ—ಬಿತ್ತಿದ್ದನ್ನು ಬೆಳಕೊಳ್ಳಬೇಕು. ಮಗಳೇ ಯೋಗ್ಯಪತಿಯನ್ನು ವರಿಸಿ ಚಿರಕಾಲ ಸುಖಿಯಾಗಿ ಬಾಳು.

ಇಂದಿರೆ—ನಡೆಯಿರಿ ನಮ್ಮ ಮನೆಗೆ ಹೋಗೋಣ.

ರಮಾ—ಬೇಡ ಬೇಡ ಮುಪ್ಪಿನ ಕಾಲದಲ್ಲಾದರೂ ಪಾಪವನ್ನು ತೊಳೆಯುವದಕ್ಕಾಗಿ ತೀರ್ಥಾಟನ ಮಾಡುತ್ತೇನೆ.

ಪದ—ಬಹುಮೌಲ್ಯವಾದ ನರದೇಹವಿದು || ಪಲ್ಲ || ಭವಸಾಗರದೊಳೀ ನೌಕೆಯು ತಾನೊಡೆ | ಯುವ ಮುನ್ನ ಜವದಿಂದ ದಾಟಿಲೊ ಮನುಜನೆ || ೧ || ಸತೀಸುತರೆಂದು ಸೀನತಿ ಭ್ರಮೆಗೊಳದಿರು | ಗತಿಯೀವ ಜಗದೀಶ ಗತಿಲೀನನಾಗಿರು || ೨ ||

ದ್ವಿತೀಯಾಂಕ ಮುಗಿದುದು.

---

## ೩ನೆಯ ಅಂಕ.

ಸ್ಥಳ—ಶಯ್ಯಾಗಾರ—ಕಮಲಾವತಿಯು ಕುಳಿತಿರುವಳು.

ಪದ—ರಾಗ—ಅಸಾವೆರಿ

ತಾಪವಪಡುತಿಹುದೀ ದೇಹ | ಶ್ರೀಪತಿ ಹರಿಸೈ ಭವಬಂಧನವ ||
ಪತಿಪ್ರೇಮವು ಸತೀಜನಕತೀ ಭಾಗ್ಯದ | ಗತಿಯೆನಿಪುದು ಸದಾಸುಖದ ನಿಧಾನವು|
ಶೀತಕರನ ತಾದಾತ್ಮದೆ ಜ್ಯೋತ್ಸ್ನೆಯು | ಅತಿಹರುಷದೆ ಜಗವನು ನಲಿಸುವಳು||೧||

ಇಹಲೋಕದಲ್ಲಿ ಯಾರಾದರೂ ನರಕವಾಸವನ್ನನುಭವಿಸುತ್ತಿದ್ದರೆ ಮುದುಕರನ್ನು ಮಾಡಿಕೊಂಡ ದುರ್ದೈವಿಗಳಾದ ಯುವತಿಯರೇ ಸರಿ! ಅದರಲ್ಲಿಯೂ ಈ ರಾವಬಹಾದ್ದೂರನ ಕೈಯಲ್ಲಿ ಕೈದಿಜನರಂತೆ ವರ್ತಿಸಬೇಕಾದ ನಾನೇ ನರಕವಾಸವನ್ನನುಭವಿಸುವಳು. ಪಾಲಿಗೆ ಬಂದದ್ದು ಪಂಚಾಮೃತವೆಂಬಂತೆ, ಮುದುಕ ಗಂಡನನ್ನು ಮಾಡಿಕೊಂಡ ಮೇಲೆ ಅವನ ಮೇಲೆ ಸಂಪೂರ್ಣ ಭಕ್ತಿ

ಯಿಟ್ಟು ನಡೆಯಬೇಕಾದದ್ದು ಹೆಂಡತಿಯ ಕರ್ತವ್ಯವೇ! ಆದರೆ ಹಸಿವೆಯಿಂದ ಕಳವಳಿಸಿ ಸಾಯುತ್ತಿರುವ ತಿರುಕನು ಸಹ ಹಳಸಿದ ಅನ್ನವನ್ನು ತಿನ್ನಲಾರನು. ಅದರಂತೆ ಯುವತಿಯರಿಗೆ ಎಷ್ಟೇ ಪತಿಯ ಇಚ್ಛೆಯಿದ್ದರೂ ಮುಪ್ಪಿನವನೊಡನೆ ಬಾಳ್ವೆ ಮಾಡುವದು ಕಷ್ಟ. ಹೊರಗೆ ಹೋದರೆ ಸಂಶಯ, ಬಂದರೆ ಸಂಶಯ, ಯಾರ ಕೂಡಾದರೂ ಮಾತಾಡಿದರೆ ಸಂಶಯ, ನೋಡಿದರೆ ಸಂಶಯ, ಕೂತರೆ ಸಂಶಯ, ನಿಂತರೆ ಸಂಶಯ! ಹೆಂಡತಿಯನ್ನು ಒಳಗಿಟ್ಟು ಕೀಲಿಹಾಕಿ ಹೋಗುವ ಎಷ್ಟೋ ಗಂಡಸರುಂಟು. ಹೆಂಗಸರೆಂದರೆ ಇವರ ಕೇವಲ ತಮ್ಮ ಉಪಭೋಗ್ಯ ವಸ್ತುವೆಂದು ತಿಳಿದು ಪಶುಗಳಂತೆ ಆಚರಿಸುತ್ತಿರುವರು ಇದರಿಂದ ಅವರಲ್ಲಿ ಮತ್ತಿಷ್ಟು ದುರ್ಬುದ್ಧಿಯುಂಟಾಗುತ್ತದೆ. ಇಷ್ಟೆಲ್ಲ ವೈಮನಸ್ಸು ಹುಟ್ಟಲಿಕ್ಕೆ ಕಾರಣವೆಂದರೆ ಅನನುರೂಪ ಜೊತೆ! ಪ್ರೇಮದೆದುರಿಗೆ ಶ್ರೀಮಂತಿಕೆಗೆ ಒಂದು ಕವಡೆಯ ಕಿಮ್ಮತ್ತು ಇಲ್ಲ. ಹಾಗಿಲ್ಲದಿದ್ದರೆ ಸತೀ ಸೀತಾದೇವಿಯು ಅಷ್ಟೈಶ್ವರ್ಯವನ್ನು ತಿರಸ್ಕರಿಸಿ ಪತಿಯೊಡನೆ ಅರಣ್ಯಕ್ಕೆ ಹೋಗುತ್ತಿರಲಿಲ್ಲ. ವಯಸ್ಸಿಗೆ ತಕ್ಕಂತೆ ಅನುರೂಪನಾದ ಪತಿಯೊಡನೆ ಬಾಳ್ವೆ ಮಾಡುವ ಸ್ತ್ರೀಯು ಕುಬೇರನ ಸಂಪತ್ತನ್ನು ಸಹ ಬಯಸಲಿಕ್ಕಿಲ್ಲ. ನನ್ನ ಗಂಡನನ್ನು ನೋಡಿದರೆ ಏನು ತಂದೆಯೋ ಅಜ್ಜನೋ ಮುತ್ತಜ್ಜನೋ ಎಂದು ಕಾಣುತ್ತಾನೆ. ಇಂಥವನಿಗೆ ಪತಿಯನ್ನಲಿಕ್ಕೆ ನಾಚಿಕೆಯು ಬರುತ್ತದೆ. ಉಪಾಯವಿಲ್ಲ ದೈವದಲ್ಲಿದ್ದದ್ದನ್ನು ತಪ್ಪಿಸುವರಾರು? ತಾಯಿತಂದೆಗಳು ಮೊದಲೇ ಇದನ್ನು ವಿಚಾರಿಸಬೇಕು.

ವಿನಾಯಕರಾವ—(ಬಂದು)ಪದ—ಪಾನಿಭರೇಲಿ

ಕಾಮಬಾಣದಿಂ ಹತಸಾದೆ | ವಿಲಾಸಿನಿ || ಪಲ್ಲ ||

ಭೂಕಮಲವೋ ನೀರಾಕರಸುತನೋ |

ಭಾಸುರ ಮುಖವೋ ಮಮ ಮನೋಹರಿಯ | ಪ್ರಮೋದವೇ || ೧ ||

ಏನಿದು? ನನ್ನ ಪ್ರಿಯೆಯ ಮುಖವು ಇಂದೇಕೆ ಕಂದಿರುವದು? ದಿನಾಲು ಬಂದ ಕೂಡಲೆ ಎಷ್ಟು ಆನಂದದಿಂದ ಎದುರುಗೊಳ್ಳುತ್ತಿದ್ದಳು! ಕಾರಣವನ್ನು ಕೇಳಬೇಕೆಂದರೆ ಸಮೀಪದಲ್ಲಿ ನೌಕರರು ಯಾರೂ ಇಲ್ಲ. ಈ ದಿವಸದಲ್ಲಿ ನೌಕರರನ್ನಿಟ್ಟುಕೊಳ್ಳುವದೆಂದರೆ ಬಿಳ್ಳೇ ಆನೆಯನ್ನು ಕಟ್ಟಿದಂತಾಗುತ್ತದೆ. ಒಂದು ತುಟಿ ಮಿಸುಕಿದರೆ ಆಗಲೇ ಹೊರಟರೇ ಮನೆಬಿಟ್ಟು. ನಮಗಂತೂ ಶ್ರೀಮಂತಿಯ ಮಬ್ಬಿನಿಂದ ಮೊದಲಿನಿಂದಲೂ ಪರಾವಲಂಬಿಗಳಾಗಿ ಸ್ವಂತ ಕೆಲಸ ಮಾಡಬೇಕೆಂದರೆ ಮೈಗೆ ಮುಳ್ಳು ಹಚ್ಚಿದಂತಾಗುತ್ತದೆ. ಎಲೇ ಗೋಪ್ಯಾ ಗೋಪ್ಯಾ!

ಅಯ್ಯೋ ಕತ್ತ್ರೀಮಗನೇ ನನ್ನ ಬೂಟನ್ನು ನಾನೇ ತೆಗೆಯ ಬೇಕಾಯಿತಲ್ಲ. ಯಾಕೆ ತೆಗೆಯಬೇಕು. ಹಾಗೆಯೇ ಮಲಗಿಬಿಟ್ಟರಾಯಿತು. ಆಕೆಯು ಇಷ್ಟು ಚಿಂತಾತುರಳಾಗಿರುವ ಕಾರಣವೇನು? ಕದಾಚಿತ್ ಅವರ ತಾಯಿಯ ನೆನಪಾಗಿರಬಹುದು, ಅಹುದು ಇದೇ ನಿಜವು. (ಮುಂದೆ ಬಂದು) ಕಮಲಾವತಿ, ಪ್ರಕೃತಿಯು ನೆಟ್ಟಗಿರುವದಲ್ಲವೆ?

ಕಮಲೆ—ಹೌದು. ಕೆಟ್ಟರೂ ಕೇಳುವವರಾರು?

ವಿನಾಯಕ—ಯಾಕೆ ನಿಮ್ಮ ತಾಯಿಯನ್ನು ನಮ್ಮ ಸಂಗಡ ತರಲಿಲ್ಲವೆಂದು ಹೀಗೆ ಖಿನ್ನಳಾಗಿರುವೆಯೇನು? ನಿನಗೆ ಗೊತ್ತಿಲ್ಲ, ನಮ್ಮಂಥ ಪ್ರೇಮಿಗಳ ಪ್ರೇಮದ ಮಧ್ಯದಲ್ಲಿ ಆ ಮುದಿಹದ್ದುಗಳಿದ್ದರೆ ಎಲ್ಲ ಹಸಗೆಡುವದು.

ಕಮಲೆ—ನಮ್ಮ ತಾಯಿಗೆ ಮುದಿಹದ್ದೆಂದು ಹೆಸರಿಡುವಾಗ ನೀವು ನಿಮ್ಮ ವಯಸ್ಸಿನ ವಿಚಾರ ಮಾಡಲಿಲ್ಲವೆಂದು ಕಾಣುತ್ತದೆ.

ವಿನಾಯಕ—ಆದರೆ ನಾನು ಗಂಡಸಿದ್ದೇನೆ. ಕಮಲಾವತೀ ಪುರುಷರ ವಯಸ್ಸಿಗೆ ಆದಿ ಅಂತಗಳೇ ಇಲ್ಲ. ಆದರೆ ನೀವು ಸ್ತ್ರೀಯರು ಹಾಗಲ್ಲ. ಮೂವತ್ತು ವರ್ಷಗಳಿಗೆ ಮುಗಿಯಿತು ನಿಮ್ಮ ತಾರುಣ್ಯ! ಮೂವತ್ತು ಮುಗಿದ ಮೇಲೆ ಸ್ತ್ರೀಯರ ಸೌಂದರ್ಯಕ್ಕೆ ಅಳಿಗಾಲವು ಆರಂಭವಾಯಿತು. ಆದರೆ ಗಂಡಸರಿಗೆ ವಯಸ್ಸು ಬೆಳೆಬೆಳೆದಂತೆ ತಾರುಣ್ಯವೂ ಒಳ್ಳೇ ಭರಭರಾಟಿಯಲ್ಲಿ ಬರುವದು.

ಕಮಲೆ—ನಿಮ್ಮೊಡನೆ ವಾದವಿವಾದ ಮಾಡುವದರಲ್ಲಿ ಏನೂ ಅರ್ಥವಿಲ್ಲ.

ವಿನಾಯಕ—ಕಮಲೇ, ನಿನ್ನನ್ನು ನಾನು ವಾದವಿವಾದ ಮಾಡುವದಕ್ಕಾಗಿ ಮದುವೆಯಾಗಲಿಲ್ಲ. ನಿನಗಾಗಿ ನೀರಿನಂತೆ ದುಡ್ಡು ಖರ್ಚು ಮಾಡಿ ಈ ಮ್ಯಾನ್‌ಶನ್ (Mantion) ರಿಝರ್ವ ಮಾಡಿಸಿದ್ದು ಕೇವಲ ವಿಲಾಸಕ್ಕಾಗಿ. ಜೀವಕ್ಕೆ ತೃಪ್ತಿಯನ್ನುಂಟು ಮಾಡುವದಕ್ಕಾಗಿ. ಮದುವೆಯಾದ ಮೇಲೆ ಸಾಹೇಬಜನರು ಹನಿಮೂನಿಗಾಗಿ ಹೊರಡುವದಿಲ್ಲವೇ? ಅದಕ್ಕಾಗಿ ನಾನು ನಿನ್ನನ್ನು ಎಷ್ಟು ಆಗ್ರಹ ಪಡಿಸಿದರೂ ನೀನು ಬರಲಿಲ್ಲವಲ್ಲ.

ಕಮಲಾ—ರಾವಬಹಾದ್ದೂರ, ಸದಸದ್ವಿವೇಕ ಬುದ್ಧಿಗೂ ನಿಮಗೂ ಎಂದಾದರೂ ಭೆಟ್ಟಿಯಾಗಿತ್ತೇನು?

ವಿನಾಯಕ—ಈ ರಾವಬಹಾದ್ದೂರನಿಗೆ ಇಲ್ಲಿಯ ವರೆಗೆ ನಿನ್ನಂಥ ತರುಣ ಸ್ತ್ರೀಯರ ಹೊರತು ಬೇರೆ ಯಾರ ಭೆಟ್ಟಿಯೂ ಆಗಿಲ್ಲ. ಕಮಲೆ ಎಲ್ಲಿಯ ಸದ್ವಿ

ವೇಕ, ಎಲ್ಲಿಯ ದೇವರು? ಎಲ್ಲಿಯ ದಿಂಡರು? ಇಂಥ ಹುಚ್ಚು ಕಲ್ಪನೆಗಳಿಗೆಲ್ಲ ಅವಕಾಶ ಕೊಡುತ್ತ ಹೋದರೆ ಸುಖದ ಹೆಸರಿನಿಂದ ಎಳ್ಳು-ನೀರು ಬಿಡಬೇಕಾದೀತು. ಊಟ ಉಡಿಗೆ ಮತ್ತು ವಿಲಾಸ ಇವೇ ಯಾವನ ಜೀವನಸರ್ವಸ್ವವಾಗಿರುವವೋ ಅವನ ಸೇವೆಗಾಗಿ, ಸ್ವತಃ ದೇವರೇಕೆ ಅವರಪ್ಪನು ಸಹ ಕೈಕಟ್ಟಿಕೊಂಡು ನಿಲ್ಲಬೇಕಾಗುವದು.

ಕಮಲಾ—ಈ ಮಾತು ಸ್ವತಃ ನಿಮಗೇ ಅನುಭವಕ್ಕೆ ಬಂದಂತೆ ತೋರುತ್ತದೆ.

ವಿನಾಯಕ—ಅದರಲ್ಲಿ ಸಂಶಯವೇನು ಕಮಲೇ? ಈ ರಾವಬಹಾದ್ದೂರನಿಗೆ ಒಮ್ಮೆ ಕೈಹಾಕಿದ ಕೆಲಸದಲ್ಲಿ ಇಂದಿನ ವರೆಗೆ ಕೈ ಹಿಂದೆಗೆದದ್ದು ಗೊತ್ತೇ ಇಲ್ಲ. ನೀವು ಬಿ. ಎ. ಎಮ್. ಎ. ಪಾಸಾದರೂ ಮತ್ತು ಹೆಂಗಸರೇ? ಮೂರ್ಖತನದ ಮೂರ್ತಿಮಂತ ಪುತ್ಥಳಿಗಳು. ಮಾತುಬಂದಾಗ ಮಾತಾಡುವದಿಷ್ಟೇ ನಿಮಗೆ ಗೊತ್ತು ಮುಂದೆ ಅದರ ಗಂಧವೂ ನಿಮಗಿರುವದಿಲ್ಲ. ಆದರೆ ಸರ್ಪದ ಜಾತಿಯು ನಮ್ಮೀ ಪುರುಷರ ಸ್ಥಿತಿಯೇ ಬೇರೆ! ಹನ್ನೆರಡು ವರ್ಷಗಳಾದರೂ ನಾವು ಹೊಟ್ಟೆಯೊಳಗಿನ ಸಿಟ್ಟು ಬಿಟ್ಟಿರುವದಿಲ್ಲ! ಇಂಥ ಶೂರರು!

ಕಮಲೆ—ದಯಮಾಡಿ ಇದಕ್ಕಿಂತ ಇದನ್ನು ಹೆಚ್ಚು ಸ್ಪಷ್ಟಮಾಡಿ ಹೇಳುವಿರೇನು?

ವಿನಾಯಕ—ಕಮಲೇ, ಮ್ಯೆಸೊಕ್ಕಿನಿಂದ ಮೇಲಿಂದಮೇಲೆ ಹೆಜ್ಜೆ ಹೆಜ್ಜೆಗೆ ಧಕ್ಕೆಯನ್ನು ತಿನ್ನುತ್ತಿದ್ದರೂ ಸೊಕ್ಕಿನಿಂದ ಪುನಃ ಅದೇ ತಪ್ಪು ಮಾಡುವದು ಆಶ್ಚರ್ಯವಲ್ಲವೇ?

ಕಮಲೆ—ಮೂಲತಃ ತಪ್ಪೇ ಲಕ್ಷದಲ್ಲಿ ಬರದಿದ್ದರೆ ಅದನ್ನು ತಿದ್ದುವದು ಹೇಗೆ?

ವಿನಾಯಕ—ಕಮಲೇ, ಹಲ್ಲುಗಳ ನಡುವೆ ನಾಲಿಗೆಯು ಸಿಕ್ಕು ಗಾಯವಾದರೆ ಅಷ್ಟು ಮಾತ್ರದಿಂದ ಹಲ್ಲು ಕಿತ್ತೊಗೆಯುವ ಕೆಲಸವನ್ನು ಯಾರೂ ಮಾಡುವದಿಲ್ಲ. ನೀನು ನಿನ್ನ ಮೂರ್ಖತನದಿಂದಾಗಲಿ ಅಥವಾ ವಯಸ್ಸಿನ ಚಂಚಲತನದಿಂದಾಗಲಿ ಆ ದಿವಸ ನನ್ನ ವಿನಂತಿಗೆ ಅಪಮಾನಮಾಡಿದ್ದಲ್ಲದೆ, ಯಥೇಷ್ಟವಾಗಿ ಬಾಯನ್ನು ಹರಿಬಿಟ್ಟಿದ್ದೆ. ಆ ದಿವಸ ನಾನು ಉಚ್ಚರಿಸಿದ ಶಬ್ದಗಳು ನೆನಪಿಗೆ ಬರುತ್ತವೆಯೇನು?

ಕಮಲೆ—ಹೌದು! ಈಗ ಅದರ ಸಂಬಂಧವೇನು?

ವಿನಾಯಕ—ಅದರ ಸಂಬಂಧವೀಗ ವಿಶೇಷವಾಗಿದೆ. ಕಮಲೇ, ಕನಕ ಮತ್ತು ಕಾಂತಾ ಇವೆರಡೂ ಶಬ್ದಗಳು ಕಿವಿಗೆ ಅಷ್ಟೇ ಮಧುರವಾಗಿ ಕೇಳುತ್ತಿವೆ; ಮತ್ತು ಅದೇ ಪ್ರಮಾಣದಿಂದ ಜಗತ್ತನ್ನು ಮೇಲೆ ಕೆಳಗೆ ಮಾಡುತ್ತಿರುತ್ತವೆ. ಆದರೆ ಈಗ ನಾನು ಆ ಸಂಗತಿಯನ್ನು ನೆನಪಿಗೆ ತರುವದಿಲ್ಲ. ಯಾಕೆಂದರೆ ಈಗ ನೀನು ಪ್ರಾಣಪ್ರಿಯೆಯಾಗಿರುವೆ. ಶ್ರೀಮಂತರೊಡನೆ ದರಿದ್ರರು ಎಂದೂ ಯಾವ ಕಾರಣದಿಂದಲೂ ಜಗಳವಾಡಬಾರದೆಂಬ ಈ ಅಮೌಲ್ಯ ಶಿಕ್ಷಣ ಕಾಣಿಕೆಯನ್ನು ನನ್ನ ಪ್ರಿಯಪತ್ನಿಗೆ ಪ್ರೇಮಪುರಸ್ಸರವಾಗಿ ಅರ್ಪಿಸುತ್ತೇನೆ. ಅದನ್ನು ನೀನು ನಿನ್ನ ಹೃದಯ ಕಪಾಟದಲ್ಲಿಟ್ಟು ಚೆನ್ನಾಗಿ ಜೋಪಾನಮಾಡಬೇಕೆಂದು ನಿನ್ನ ಈ ಪತಿಯು ಕೈಮುಗಿದು ಬೇಡಿಕೊಳ್ಳುತ್ತಾನೆ.

ಕಮಲಾ—ಪದ ರಜನಿನಾಥ ಎಂಬಂತೆ

ಜಗವು ತಾಪದಾ ನಿವಾಸವಹುದು | ಬಗೆಗನುರೂಪವಿಯೋಗದೆ ಸತತ ||ಪ||
ನೀರೇಜತಾ ಹಿರುಕರನಿಂದ | ಸೂರನ ತೇಜದೆ ಕುಮುದಿನಿ ನಗವು || ೧ ||

ರಾವಬಹಾದ್ದೂರ, ನಿಮ್ಮೊಡನೆ ನಾನು ಸ್ವಸಂತೋಷದಿಂದ ಲಗ್ನಮಾಡಿಕೊಂಡೆನೆಂದು ನೀವು ತಿಳಕೊಂಡಂತೆ ತೋರುತ್ತದೆ.

ವಿನಾಯಕ—ಅಪ್‌ಕೋಸನ್! ಇದರಲ್ಲಿ ಸಂಶಯವೇನು?

ಕಮಲಾ—ಹಾಗಿದ್ದರೆ ಸ್ಪಷ್ಟವಾಗಿ ಹೇಳುತ್ತೇನೆ. ತಾಯಿಯ ಮಾನವನ್ನುಳಿಸುವದಕ್ಕಾಗಿ ನಾನಿದನ್ನು ಒಪ್ಪಿದೆನಲ್ಲದೆ ನಿಮ್ಮಂಥ ಮುದುಕರೊಡನೆ ಬಾಳ್ವೆ ಮಾಡುವದಕ್ಕಿಂತ ಅಗ್ನಿನಾರಾಯಣನಿಗೆ ಆಹುತಿಯಾಗುವದು ಹಿತಕರ!

ವಿನಾಯಕ—ನಾನು ಅದನ್ನೇ ಹೇಳುತ್ತೇನೆ. ನೀನು ಎಷ್ಟು ಜಾಣಳಿದ್ದರೂ, ಜಗತ್ತಿನ ವಂಚಕತನವು ತಿಳಿಯುವಷ್ಟು ವ್ಯವಹಾರಜ್ಞಾನವು ನಿನಗೆ ಬರಲಿಲ್ಲ. ನೀನು ಇದಕ್ಕೆ ಒಪ್ಪಲಿಕ್ಕಿಲ್ಲವೆಂದೇ ನಿಮ್ಮ ತಾಯಿಗೆ ಇಲ್ಲದ್ದೊಂದು ಆಶೆ ಅಂಜಿಕೆಗಳನ್ನು ತೋರಿಸಿ ಈ ಕೆಲಸದಲ್ಲಿ ಪ್ರೇರಿಸಿದೆನು. ಆದರೆ ಅದಕ್ಕೆ ನೀನು ಸಂಪೂರ್ಣವಾಗಿ ಬಲಿಬಿದ್ದೆ. ನಿನ್ನ ತಾಯಿಯು ನಿನಗೆ ಹೇಳಿದ ಸಂಗತಿಯು ನೆನಪಿದೆಯೇನು?

ಕಮಲಾ—ರಾವಬಹಾದ್ದೂರ, ಎಂಥ ಮನುಷ್ಯನಾದರೂ ಪರಿಸ್ಥಿತಿಗೆ ಗುಲಾಮನೇ ಸರಿ. ಧನಕ್ಕೆ ನನ್ನ ತಾಯಿಯು ಮೋಹಿಸಿದಳೆಂದು ಹೇಳುವದಕ್ಕಿಂತ ಅದರಲ್ಲಿ ಸರ್ವ ದೋಷವನ್ನು ನಮ್ಮ ದಾರಿದ್ರ್ಯಕ್ಕೆ ಕೊಡಬೇಕಾಗುವದು.

ವಿನಾ—ಹುಚ್ಚು ಹುಡುಗೀ ಎಲ್ಲಿಯ ದೋಷ, ಎಲ್ಲಿಯ ಮೋಹ? ರಮಾ ಬಾಯಿಯ ವಿಲಾಸವಿಷಯು, ನನ್ನ ಧನಸಂಚಯು ಇವೇ ಈ ಜೊತೆಯನ್ನು ಹೊಂದಿಸಿದವು. ಕಮಲೇ, ನಿನ್ನ ಉದ್ದ ದುಡ್ಡಿನ ರಾಶಿಯನ್ನು ಸುರುವಿದರೂ ನೀನು ಸರಳ ಮಾರ್ಗದಿಂದ ನನ್ನೊಡನೆ ಮದುವೆಯಾಗಲಿಕ್ಕೆ ಒಪ್ಪಲಾರೆಯೆಂಬ ನನಗೆ ಮೊದಲೇ ತಿಳಿದದ್ದರಿಂದ ಧನಲೋಭಿಯಾದ ನಿನ್ನ ತಾಯಿಗೆ ಸ್ವಲ್ಪ ದುಡ್ಡಿನ ಆಶೆ ಹಚ್ಚಿ ಒಂದು ಖೊಟ್ಟಿ ಪತ್ರದ ಜಾಲವನ್ನು ಹಾಕಿದೆನು. ಅದರಲ್ಲಿ ನೀನು ಸಹಜವಾಗಿ ಸಿಕ್ಕುಬಿದ್ದಿ.

ಕಮಲಾ—ಹಾಗಾದರೆ ಚಂದ್ರಹಾರ....

ವಿನಾಯ—ಈ ಲಗ್ನಹಾರಕ್ಕಾಗಿ ನಡುವೇ ಕಲ್ಪಿತವಾಯಿತು.

ಕಮಲಾ—ಹಾಗಿದ್ದರೆ ತಾಯಿಯು ಹೇಳಿದ ಚಂದ್ರಹಾರದ ಸಂಗತಿಯು ಸುಳ್ಳೇ.

ವಿನಾಯ—ಅಕ್ಷರಶಃ ಸುಳ್ಳು! ನನಗೆ ಬರಕೊಟ್ಟ ಖೊಟ್ಟಿಪತ್ರದಿಂದಾಗುವ ತೊಂದರೆಯನ್ನು ತಪ್ಪಿಸಿಕೊಳ್ಳುವದಕ್ಕಾಗಿ ಈ ಬಗೆಯ ಜಾಲವನ್ನು ರಚಿಸಿದಳು.

ಕಮಲಾ—ನನ್ನ ತಾಯಿಯು ಅಂಥವಳಲ್ಲ.

ವಿನಾ—ದಾರಿದ್ರ್ಯವು ಆರನೆಯ ಮಹಾಪಾತಕವೆಂಬದನ್ನು ಕೇಳಿಲ್ಲವೇ? ಸರ್ವದುರ್ಗುಣಗಳನ್ನು ಈ ಬಡತನವೇ ಕಲಿಸುವುದು. ದೂರವೇಕೆ? ನಿನ್ನ ತಾಯಿಯು ಸಹ ಈ ಬಡತನದಿಂದಲೇ ನನ್ನ ಬಲೆಗೆ ಬಿದ್ದಳು.

ಕಮಲಾ—ರಾವಬಹದ್ದೂರ, ನೀವು ಇಷ್ಟು ನೀಚಸ್ಥಿತಿಯವರಿರುವಿರೆಂಬ ಕಲ್ಪನೆಯು ಸಹ ನನಗೆ ಬಂದಿದ್ದಿಲ್ಲ. ನನ್ನನ್ನು ವಂಚಿಸುವದಕ್ಕೆ ನನ್ನ ತಾಯಿಗೆ ಇಲ್ಲದ ದುರಾಶೆಹಚ್ಚಿ ಕಡೆಗೆ ಆಕೆಯನ್ನು ಉಟ್ಟ ಅರಿವೆಯಿಂದ ಹೊರದೂಡಿದಿರಲ್ಲವೇ?

ವಿನಾ—ಇದು ನಮ್ಮ ಸಾಹೇಬಜನರ ರಾಜ್ಯದಾಳಿಕೆಯ ತಂತ್ರ. ಮುಳ್ಳಿನಿಂದಲೇ ಮುಳ್ಳು ತೆಗೆಯಬೇಕು. ಅದು ಹೊರಗೆ ಬಂದ ಮೇಲೆ ಈ ಮುಳ್ಳಿನ ಉಪಯೋಗವೇನು? ಬೇರೆ ಕಡೆಗೆ ಚೆಲ್ಲುವದೇ ಅಲ್ಲವೇ?

ಕಮಲಾ—ಸಮಾಜದಲ್ಲಿ ದೊಡ್ಡವರೆಂದು ಮೆರೆಯುವ ನಿಮ್ಮಂಥ ಕೃಷ್ಣಸರ್ಪಗಳು ನಮ್ಮಂಥ ಬಡವರ ಮನೆಯನ್ನು ಹೊಕ್ಕು ತಮ್ಮ ವಿಷಫೂತ್ಕಾರದಿಂದ ಅದನ್ನೆಲ್ಲ ನೆಲಸಮ ಮಾಡಿ ಬಿಡುತ್ತವೆ.

ವಿನಾಯ—ಕಮಲೇ, ಮೊದಲು ನಿನಗೆ ಕಚ್ಚಿದ ನಿನ್ನ ತಾಯಿಯಾದ

ನಾಗಿಣಿಯ ಚಿತ್ರವನ್ನು ನಿನ್ನ ಕಣ್ಣೆದುರಿಗೆ ತೆಗೆದುಕೋ! ಆ ಮೇಲೆ ಬೇರೆಯ ವರಿಗೆ ಹೆಸರಿಡು.

ಕಮಲಾ—ಅಯ್ಯೋ ಕಲಿಕಾಲವೇ, ಹಡೆದ ತಾಯಿಯೇ ಮಗಳ ಕುತ್ತಿಗೆಯನ್ನು ಕೊಯ್ಯುತ್ತಿರುವಳಲ್ಲಾ—

ವಿನಾಯಕ—ಹೇಗಿದ್ದರೂ ಆಕೆಗೆ ನೀನು ಮಗಳಲ್ಲವೇ? ತಾಯಿಯ ಉತ್ಕಟೇಚ್ಛೆಯನ್ನು ಪೂರಯಿಸುವದಕ್ಕಾಗಿ ಮಗಳು ತೋರಿಸಿದ ಔದಾರ್ಯವನ್ನು ನೋಡಿ ಯಾವ ಅಳಿಯನಿಗೆ ತನ್ನ ಪತ್ನಿಯ ಬಗ್ಗೆ ಅಭಿಮಾನವೆನಿಸಲಿಕ್ಕಿಲ್ಲ?

ಕಮಲಾ—ದೇವಾ, ನಿನಗೆ ಯಾವ ಅಪರಾಧವನ್ನು ಮಾಡಿದ್ದೆನೆಂದು ಇಂಥ ದುರ್ದಶೆ ಮಾಡಿದೆ?(ಎಂದು ಅಳುವಳು.)

ವಿನಾಯಕ—ಕಮಲೇ ಅಳುವೆಯೇಕೆ? ನಿನ್ನ ತಾಯಿಯು ಒಂದು ವೇಳೆ ನಿನ್ನನ್ನು ವಂಚಿಸಿದ್ದರೂ ನಾನು ನಿನ್ನನ್ನು ರಾಣಿಯಂತೆ ಇಡುವೆನು.

ಕಮಲಾ—ನನ್ನ ಮೇಲೆ ತಮ್ಮ ಪ್ರೀತಿಯಿದ್ದರೆ ದಯಮಾಡಿ ಸ್ವಲ್ಪ ಸುಮ್ಮನೆ ಬಿಡಿರಿ. (ನಡುಗಿದಂತೆ ಮಾಡುವಳು.)

ವಿನಾಯಕ—ಏನಿದು ಜ್ವರಬಂದಂತೆ ಕಾಣುತ್ತದೆ ಕಮಲೇ. ಔಷಧವನ್ನು ತರಲೇನು?

ಕಮಲಾ—(ಸ್ವಗತಂ)ಅರಸಿಕತನವೆನ್ನುವದು ಇದಕ್ಕೇ. ಯುವತಿಯರಿಗೆ ಯೌವನದಲ್ಲಿ ಜ್ವರಬರುವ ಕಾರಣವೇನು?(ಪ್ರಕಾಶಂ)ಬೇಡ ಬೇಡ. ತಾವು ಸ್ವಲ್ಪ ವಿಶ್ರಮಿಸಬೇಕು.

ವಿನಾ—ಛೇ ಛೇ, ತಡೆ. ಕರ್ಣಿಕ ಎಗ್ಝಮಿಕ್‌ಶ್ಚರ ತರುತ್ತೇನೆ. (ಹೋಗುತ್ತಾನೆ.)

ಕಮಲಾ—ರೋಗವೊಂದು, ಉಪಾಯವು ಮತ್ತೊಂದು. ಇಂಥ ಮುದುಕರಿಗೆ ಯುವತಿಯರ ಜ್ವರದ ಕಲ್ಪನೆಯಾದರೂ ಹೇಗೆ ಬರಬೇಕು? ಏನೋ ಹುಚ್ಚುವರಂತೆ.

ವಿನಾ—ಔಷಧವನ್ನು ಕುಡಿಸುವೆನು. (ಕುಡಿಯುವಳು.)ಯಾಕೆ ಜ್ವರವು ಕಡಿಮೆಯಾಯಿತೇ!

ಕಮಲಾ—ಛೇ ಛೇ! ನೀವು ಔಷಧವನ್ನು ತರಲಿಕ್ಕೆ ಹೋದಾಗಲೇ ಜ್ವರವು ಕಡಿಮೆಯಾಗಿದೆ.

ವಿನಾ—ಸ್ವಲ್ಪ ಏನಾದರೂ ಊಟಕ್ಕೆ? ಖಾನಾವಳಿಯಿಂದ ತರಿಸಲೇನು?

ಕಮಲಾ—ಬೇಡ ಬೇಡ, ನಾನೇ ಎದ್ದು ಮಾಡುತ್ತೇನೆ.

ವಿನಾ—ಛೀ ಛೀ. ನಿನಗೆ ಶ್ರಮವು ಬೇಡ. ಖಾನಾವಳಿಯಿಂದ ತರಿಸುತ್ತೇನೆ. (ಮೈಮುಟ್ಟಿ ಜ್ವರವು ಒಂದೇಸವನೇ ಏರುತ್ತಿರುವದನ್ನು ನೋಡುವನು.) ಓಹೋ ಡಾಕ್ಟರರನ್ನು ಕರೆಸಬೇಕು. ಎಲೇ ಗೋವ್ಯಾ ಎಲೇ ಗೋವ್ಯಾ, ಸತ್ತೇನಲೇ ಸೂಳೇಮಗನೇ?

ಗೋವಿಂದ—ಇಲ್ಲ ದೇವರು, ಮಾತಾಡುತ್ತಿರುವೆನಲ್ಲ! ಯಾಕೆ ಧನಿಯರೇ, —

ವಿನಾ—ಎಲೇ ಬೇಗ ಹೋಗಿ, ಆ ವಸಂತ ಡಾಕ್ಟರರನ್ನು ಕರಕೊಂಡು ಬಾರೋ.

ಗೋವಿಂದ—ಅವರ ಮನೆಯೆಲ್ಲಿರುವದೋ ಏನೋ?

ವಿನಾ—ಆ ಮಂಗಳವಾರ ಪೇಟೆಯಲ್ಲಿ ಮೂರು ಅಂತಸ್ತಿನ ಮನೆಯಿದೆ. ಅಲ್ಲಿ ಹೋಗಿ ಕೇಳು!

ಗೋವಿಂದ—ಆ ಮನೆಯು ಸಿಗುವದೋ ಇಲ್ಲವೋ;

ವಿನಾ—ಇದೇ ದಾರಿಯಿಂದ ಹೋಗಿ ಅಲ್ಲೊಂದು ಚೌಕಿ ಇದೆ. ಅಲ್ಲಿ ಎಡಕ್ಕೆ ತಿರುಗು. ಮುಂದೆ ಸ್ವಲ್ಪದರಲ್ಲೇ ಆ ಮನೆಯು ಬರುವದು.

ಗೋವಿಂದ—ಅವರು ಊರಲ್ಲಿರುವರೋ ಇಲ್ಲವೋ?

ವಿನಾ—ಇದ್ದಾರೆ ಹೋಗು!

ಗೋವಿಂದ—ಕರೆದರೆ ರಾತ್ರಿ ಬಾಗಿಲ ತೆಗೆಯುವರೋ ಇಲ್ಲವೋ?

ವಿನಾ—ತೆಗೆಯುತ್ತಾರೆ. ನನ್ನ ಹೆಸರು ಹೇಳು.

ಗೋ—ಅವರಲ್ಲಿ ಔಷಧವಿದೆಯೋ ಇಲ್ಲವೋ?

ವಿನಾ—ಇದೆ ಹೋಗು.

ಗೋ—ಅದರಿಂದ ಗುಣವಾಗುತ್ತಿದೆಯೋ ಏನೋ!

ವಿನಾ—ಗುಣವಾಗುತ್ತದೆ ಹೋಗು.

ಗೋ—ಅವರನ್ನು ನಾನು ಕರಕೊಂಡು ಬರುವದರೊಳಗೆ ಇವರು ಜೀವದಿಂದಿರುತ್ತಾರೋ........

ವಿನಾ—ಥೂ ಬದ್ಮಾಷ ಸುಳೇಮಗನೇ. ನಾನೇ ಹೋಗುತ್ತೇನೆ ನಡೆ; ನೀನು ಹಾಳಾಗಿ ಹೋಗು. (ಎಂದು ವಿನಾಯಕರಾಯನು ಹೋಗುತ್ತಾನೆ.)

ಗೋ—(ಜನಾಂತಿಕಂ) ಸಾವಿರ ಕುದುರೆ ಸರದಾರ ಮನೆ ಹೆಂಡತಿ

ಪಿಂಜಾರ. ನೋಡಿದಿರಾ, ರಾವಬಹಾದ್ದೂರರು ಹೇಗೆ ಓಡಿದರು?

ಕಮಲಾ—ಅಯ್ಯೋ ಹಾಳಾದ ಮುದಿತನವೇ? ಇವರ ಮುದಿತನದ ಅವಿವೇಕವನ್ನು ಕಂಡು ಕೈಯೊಳಗಿನ ಆಳು ಹೋಳುಗಳು ಸಹ ಹೆದರದಾದರು! ಪತ್ನಿಯ ಅಂತರ್ಗತವನ್ನು ತಿಳಿಯುವ ಶಕ್ತಿಯಂತೂ ಈ ಮುದುಕರಲ್ಲಿ ಅದೂ ಮುಪ್ಪಾಗಿ ಹೋಗಿರುತ್ತದೆ.

ಪದ—ಗಜಲ.

ರಸಿಕನಾದ ಪುರುಷವರನೆ| ಪ್ರಮದೆಯು ಪ್ರೇಮದಾಸ್ವಾದವ ಗೈಯುವ ನಲುವಿನಿಂದೆ ನಗುತೆ ನಿಂದು ಜಲಜವನಿತೆ ಮಧುಹೃದಯುವ | ಚೆಲುವ ಭ್ರಮರ ನೋರ್ವ ತಿಳಿವ || ೧ ||

ದುರುಳ ಮದನ, ನಿನ್ನ ದುಷ್ಟತನವನ್ನು ಏನೆಂದು ಹೇಳಲಿ? ನಿನ್ನ ಬಾಣ ಗಳು ಹೂವಿನವು! ಆದರೆ ವಜ್ರಕ್ಕಿಂತಲೂ ಕಠಿಣವಾಗಿರುವವು. ನಿನಗೆ ಪಂಚ ಬಾಣಗಳೆಂದು ಹೇಳುವರು. ಹಾಗಿದ್ದರೆ ಜಗತ್ತಿನ ಆದಿಯಿಂದ ವಿರಹಿಮೃಗಗಳ ಬೇಟೆಯಾಡುವ ನಿನ್ನ ಬಾಣಗಳು ಹೇಗೆ ಸವೆಯುವದಿಲ್ಲ? ನನ್ನಂಥ ಅಬಲೆಯ ಮೇಲೆ ಕೈಮಾಡುವ ನಿನ್ನ ಗಂಡಸತನವನ್ನು ಎಷ್ಟೆಂದು ಹೊಗಳಲಿ? ಪರಮೇ ಶ್ವರನು ನಿನ್ನನ್ನು ಬೂದಿಯಾಗುವಂತೆ ಸುಟ್ಟರೂ ನಿನ್ನ ಹಾವಳಿಯು ಕಡಿಮೆಯಾಗ ಲಿಲ್ಲ. ಛೀ ಛೀ, ಇದರಲ್ಲಿ ನೀನೇನು ಮಾಡೀ? ತಿಳಿದೂ ತಿಳಿದೂ ನಾವಾಗಿ ಹಾಳುಬಾವಿ ಬಿದ್ದರೆ ದೈವವೇನು ಮಾಡುವದು? ಆಃ! ಹಾಳಾದ ಯೌವನವೇ!

ವಿನಾಯಕರಾವ—(ಡಾ. ವಸಂತರೊಡನೆ ಪ್ರವೇಶಿಸಿ) ಇಗೋ ಡಾಕ್ಟ ರರೇ ನನ್ನ ಪ್ರಿಯಪತ್ನಿಯು ಇಲ್ಲಿಯೇ ಇರುವಳು. ಸ್ವಲ್ಪ ರೋಗ ಪರೀಕ್ಷೆ ಮಾಡಿರಿ. ತಾವು ತಮ್ಮ ಫೀ ದೆಸೆಯಿಂದ ಹಿಂದುಮುಂದೆ ನೋಡುವ ಕಾರಣವಿಲ್ಲ.

ಕಮಲಾ—(ಸ್ವಗತಂ) ಅಯ್ಯೋ ದೈವವೇ! ಪುನಃ ಇವರನ್ನೇಕೆ ಇಲ್ಲಿಗೆ ತಂದೆ? ಅಂತೂ ನನ್ನ ಪಾತಿವ್ರತ್ಯವನ್ನು ಒರೆಗಲ್ಲಿಗೆ ಹಚ್ಚುವ ಪ್ರಸಂಗ ಬಂದಿದೆ! ಉಪಾಯವಿಲ್ಲ, ಮನಸ್ಸನ್ನು ಬಿಗಿಹಿಡಿಯಲೇ ಬೇಕು.

ಡಾ. ವಸಂತ—(ಎದ್ದು ಸ್ವಗತಂ) ಮನಸ್ಸನ್ನು ಜಯಿಸುವದಕ್ಕಾಗಿ ಇಲ್ಲಿಯ ವರೆಗೆ ಬಹು ಪ್ರಯತ್ನ ಮಾಡಿ ಪ್ರ್ಯಾಕ್ಟೀಸಿನ ಭರಭರಾಟದಲ್ಲಿ ಮನ ಸ್ಸನ್ನು ಸ್ವಲ್ಪ ಹಿಡತದೊಳಗೆ ತಂದಿರುವೆನು. ಇಲ್ಲೇನಾಗುವದೋ ನೋಡ ಬೇಕು. (ಪ್ರಕಾಶಂ) ಬಾಯಿಯುವರೇ ಸ್ವಲ್ಪ ಕೈಕೊಡಿರಿ (ಸ್ಪರ್ಶಸುಖವನ್ನು

ಅನುಭವಿಸಿದಂತೆ ಮಾಡುವನು)

ಕಮಲಾ—(ಸ್ವಗತಂ) ಆಃ! ಎಂಥ ಸುಖಸ್ಪರ್ಶವಿದು! ಮನಸ್ಸು ಮೆಲ್ಲ ಮೆಲ್ಲನೆ ವಿಕಾರವಶವಾಗುತ್ತಿರುವದಲ್ಲ!

ಡಾ. ವಸಂತ—(ಸ್ವಗತಂ) (ಪರೀಕ್ಷಿಸಿ ನೋಡಿ) ರೋಗವಾವದು, ಈತನು ಇಲ್ಲಿಯವರೆಗೆ ಮಾಡಿರುವ ಉಪಾಯವಾವದು? ಇವು ಪ್ರೇಮಜ್ವರಗಳು. ಶೀತಜ್ವರಗಳಲ್ಲ. ಎಂದ ಮೇಲೆ ಕರ್ಣೀಕರ ಔಷಧದ ಉಪಯೋಗವೇನು? ಪ್ರೇಮಜ್ವರದ ಮೇಲೆ ರಾಮಬಾಣ ಔಷಧವೆಂದರೆ, ತನ್ನೊಡನೆ ತನ್ಮಯನಾಗುವ ಪತಿ! ಆತನ ಸುಖಸಹವಾಸದಲ್ಲಿ ಸಿಗುವ ರತಿ!! ತರುಣಿಯರ ರೋಗಕ್ಕೆ ಅದೇ ಗತಿ! ಆದರೆ ಈ ತರುಣಿಯರ ಕಳವಳವು ಮುದುಕರಿಗೆ ತಿಳಿಯುವದೆಂತು? ತಿಳಿದರೂ ಮಾಡುವದೇನು? ಈ ರೋಗವನ್ನು ಕಡಿಮೆ ಮಾಡಲಿಕ್ಕೆ ಪತಿಯ ಹೊರತು ಇತರರಿಗೆ ಸಾಧ್ಯವಿಲ್ಲ. ಆದರೂ ಈಕೆಯ ಲಕ್ಷಣವನ್ನು ನೋಡಿದರೆ ವಿಕಾರಕ್ಕೆ ವಶವಾದಂತೆ ತೋರುತ್ತದೆ. (ಪ್ರಕಾಶಂ) ರಾವಬಹಾದ್ದೂರ ರೋಗವೇನೂ ಅಷ್ಟು ಭಯಂಕರವಾದದ್ದಿಲ್ಲ. ಆದರೂ ಹೊತ್ತಿಗೆ ಕರೆಸಿದ್ದು ಒಳ್ಳೆಯದಾಯಿತು. ನಿಮ್ಮ ಆಳನ್ನು ಕರೆಯಿರಿಲ್ಲಿ, ಪ್ರಿಸ್ಕ್ರಿಪ್ಶನ್ ಕೊಟ್ಟು ದವಾಖಾನೆಗೆ ಕಳಿಸುತ್ತೇನೆ.

ವಿನಾಯಕರಾವ—ಏ ಗೋವ್ಯಾ ಗೋವ್ಯಾ,

ಗೊವ್ಯಾ—ತಮ್ಮ ಆಜ್ಞಾಧಾರಕ ನಮ್ರಸೇವಕನು ಇಲ್ಲಿಯೇ ಇರುವನು.

ವಿನಾಯಕ—ಹೋಗು ಇವರ ದವಾಖಾನೆಗೆ ಹೋಗಿ ಇದರಲ್ಲಿ ಬರೆದಂತೆ ಔಷಧ ತಕ್ಕೊಂಡು ಬಾ.

ಗೋವ್ಯಾ—ದವಾಖಾನೆಯನ್ನು ತೋರಿಸಲಿಕ್ಕೆ ತಾವು ಬಂದರೆ........

ವಿನಾಯಕ-- ಥೂ ಮೂರ್ಖಾ........

ಡಾ.—ನಾನು ನನ್ನ ಮನೆಯ ನಂಬರ ಹೇಳುತ್ತೇನೆ. ಟ್ಯಾಕ್ಸಿಯ ಮೇಲೆ ಹೋಗು. (ಗೋವ್ಯಾ ಹೋಗುವನು.)

ಕಮಲಾವತಿ (ಸ್ವಗತಂ)—ಈ ತರುಣನು ಕೈಹಿಡಿದಕೂಡಲೆ ಅರ್ಧ ಜ್ವರವು ಕಡಿಮೆಯಾದಂತಾಗಿದೆ. ನಿಜವಾಗಿ ಇವನು ಮೂರು ನಾಲ್ಕು ದಿವಸ ಬರುತ್ತ ಹೋಗುತ್ತ ಇದ್ದರೆ ನಿಶ್ಚಯವಾಗಿಯೂ ತಾಪವು ಕಡಿಮೆಯಾಗುವದು. ಈಗ ಒಮ್ಮೆಲೆ ಕಡಿಮೆಯಾಯಿತೆಂದು ಹೇಳದರೆ, ಡಾಕ್ಟರರು ಬರುವದು ನಿಂತು ಹೋಗುವದು. ಗುಣವಾಗಲಿಲ್ಲೆಂದು ಹೇಳಿದರೆ ಆಗಲೂ ಡಾಕ್ಟರರು ಬರು

ವದು ನಿಲ್ಲುವದಲ್ಲದೆ, ಅವರ ಹೆಸರಿಗೂ ಕಲಂಕ ಹತ್ತುವದು. ಆದುದರಿಂದ ಈಗ ತರುವ ಔಷಧವನ್ನು ತಕ್ಕೊಂಡಕೂಡಲೆ ಗುಣಮುಖವು ತೋರುತ್ತಿದೆ ಯೆಂದೂ, ಇನ್ನೆಂಟು ದಿನಗಳವರೆಗೆ ಇದೇ ಉಪಚಾರವೇ ನಡೆಯಬೇಕೆಂದೂ ಪತಿಗೆ ಹೇಳಿದರಾಯಿತು! ಆದರೆ ಛೇ! ಇದು ಅಕಾರ್ಯವಾಗುವದಿಲ್ಲವೇ? ಮದನ, ನಿನ್ನ ಅಟ್ಟುಳಿಯಲ್ಲಿ ನಾನೇನಾಗುವೆನೋ ತಿಳಿಯೆನು.

ಡಾ. ವಸಂತ:—(ಆಳಿನಿಂದ ಔಷಧ ತಕ್ಕೊಂಡು) ಈ ಔಷಧವನ್ನು ತಕ್ಕೊಂಡ ೧೫ ಮಿನಿಟುಗಳಲ್ಲಿಯೇ ಈ ಜ್ವರವಿಳಿಯಲಿಕ್ಕೆಬೇಕು. ಔಷಧವನ್ನು ಕೊಡಿರಿ. (ಕಮಲಾವತಿಯು ಔಷಧ ಕುಡಿಯುವಳು)

ವಿನಾಯಕ:—ಡಾಕ್ಟರರೇ, ತಮ್ಮ ಕೆಲಸವು ಹೇಗೆ ನಡೆದದೆ?

ಡಾ. ವಸಂತ:—ನಡೆದದೆ. ಚೆನ್ನಾಗಿಯೇ ನಡೆದದೆ; ಯಾವುದಕ್ಕೇನೂ ಕೊರತೆಯಿಲ್ಲ.

ವಿನಾಯಕ:—ತಮ್ಮ ಕುಟುಂಬವೆಲ್ಲಿದೆ?

ಡಾ. ವಸಂತ:—ನಾನು ಲಗ್ನವನ್ನು ಮಾಡಿಕೊಂಡಿಲ್ಲ.

ವಿನಾಯಕ:—ನಿಜ, ನಿಜ! ಇನ್ನೂ ತಾರುಣ್ಯದ ಚಂಚಲ ಸ್ಥಿತಿಯು ಹೋಗಿಲ್ಲ. ಇನ್ನೂ ೧೫-೨೦ ವರ್ಷಗಳನಂತರ ಮನಸ್ಸು ಸ್ಥಿರವಾಗಿ ದೊಡ್ಡ ಮನುಷ್ಯರಾದಿರೆಂದರೆ ಮದುವೆಗೆ ಯೋಗ್ಯರಾಗುವಿರಿ; ಮತ್ತು ಸುಖದಿಂದ ಬಾಳುವಿರಿ.

ಡಾ. ವಸಂತ:—(ಸ್ವಗತಂ) ಇವರ ಸಂಸಾರಸುಖವೇ ನಮಗೂ ಗಂಟು ಬೀಳುವದಾದರೆ ನಾವೂ ಕೈಗಡದ ಮಕ್ಕಳನ್ನೇ ಮುದ್ದಾಡಬೇಕಾದೀತು. (ಪ್ರಕಾಶಂ) ಹೌದು, ಅದಕ್ಕಾಗಿಯೇ ಬಿಟ್ಟಿದ್ದೇನೆ. (ಕಮಲಾವತಿಗೆ) ತಮ್ಮ ಪ್ರಕೃತಿ ಯಲ್ಲಿ ಹೇಗೆನಿಸುತ್ತಿದೆ?

ಕಮಲಾ:—ಈಗ ಸ್ವಲ್ಪ ಸಮಾಧಾನವೆನಿಸುತ್ತದೆ. ಜ್ವರವೂ ಕಡಿಮೆ ಯಾಗಿವೆ.

ವಿನಾ:—ವಾಃ! ಡಾಕ್ಟರ, ನಿಮ್ಮ ಔಷಧದ ಪರಿಣಾಮವು ಇಷ್ಟು ತೀಕ್ಷ್ಣ ವಾಗಿದೆಯೆಂದು ನಾನು ತಿಳಿದಿರಲಿಲ್ಲ.

ಡಾ. ವಸಂತ:—ಆದರೂ ಇನ್ನೂ ೮-೧೦ ದಿವಸಗಳವರೆಗೆ ಉಪಚಾರ ಮಾಡಬೇಕಾಗುವದು.

ಕಮಲಾ:—(ಸ್ವಗತಂ) ದೇವರೇ ಕೈಗೂಡಿಸಿಕೊಟ್ಟನು!

ವಿನಾ:—ಡಾಕ್ಟರ, ನಾವು ಪರಕೀಯರೆಂದು ತಿಳಿಯಬೇಡಿರಿ. ನಾವು ಬಹುಶಃ ಆಫೀಸಿನಲ್ಲಿರುತ್ತೇವೆ. ತಾವು ದಿನಾಲು ಬಂದು ಔಷಧೋಪಚಾರ ಮಾಡುತ್ತ ಹೋಗಬೇಕು.

ಡಾ. ವಸಂತ:—ಆಗಲಿ.

## ಪ್ರವೇಶ—೨

(ಸ್ಥಳ—ರಸ್ತೆಯ ಮೇಲೆ ಸೇವಕನು ಬರುವನು.)

ಗೋವ್ಯಾ:—ಅಂತೂ ಕಲಿಯುಗ ಕೆಟ್ಟಿತು ಕಾಣಪ್ಪ. ಯಾರವ್ಯಾಲ ನಂಬಿಗಿ ಇಡುದು ಯಾರ ವ್ಯಾಲ ಇಡಬಾರದು ಅನ್ನುದು ತಿಳಿದಂಗ ಆಗಿ ಹೋಯ್ತು. ಯಾರ ದಾಕ್ತಾರನೋ ಏನೋ ನಮ್ಮ ಅವ್ವನರ ಹತ್ತರ ಬಂದು ಏನೇನು ಮಾಡುತ್ತಾರೋ ಗೊತ್ತಾಗವಲ್ಲದು. ದಣೇರ ನೋಡಿದರ ಮನಿ ಯಾಗ ಇರುದಿಲ್ಲ. ಅವ ಬಂದಕೂಡ್ಲೆ ಏನಾರ ಹೇಳಿ ನನ್ನ ಹೊರಗ ಕಳಿಸಿ ಬಿಡ್ತಾರ. ಆ ಬಿಕೀದಾಸಿ ಚಂಪಿ ಮಾತ್ರ ಯಾವಾಗಲೂ ಅವರ ಹತ್ತರಾನ ಇರ ತಾಳ; ಕೇಳಬೇಕಂದರ ಹೊತ್ತ ಸಿಗಲೊಲ್ಲದು. ಒಟ್ಟಿನವ್ಯಾಲೆ ಕೆಲಸ ನೆಟ್ಟಗೆ ಕಾಣುದಿಲ್ಲ. (ನೋಡಿ) ಅಹಾ! ಚಂಪೆ ಇಲ್ಲೇ ಬರ್ತಾಳ, ಇಲ್ಲೇನರ ನೀರು ಬಿಡತತೆನ ನೋಡತೇನಿ.

ಚಂಪೆ:—(ಸ್ವಗತಂ) ಈ ಬಿದಿಗಡಕ ಹೆಂಗಸು ಗಂಡಸರ್ಗೆ ಹೊತ್ತ ಗೊತ್ತು ಗಳಿರೋದೇ ಇಲ್ಲ ನೋಡ್ರಿ. ಹೊಟ್ಟೆದಸಿಂದ ಬಂದು ಇಲ್ಲಿ ಸಿಕ್ಕೇನಿ. ಈ ಕಮ ಲವ್ವನವರು ಮುದುಕ ಗಂಡನವ್ಯಾಲ ಮನಸತಗದು ಆ ಡಾಗದಾರನ ಸಂಗಡ ಹೋಗಬೇಕಂತ ಮಾಡಿದಾರ. ಹೆಂಗಸರಿಗೆ ಗಂಡನ ದೇವರಂತೆ! ಈ ಕಲತರ ಹಿಂಗಮಾಡಿದವ್ಯಾಲ ತಿಳಿಯದವರು ಎಷ್ಟು ಮಾಡಬೇಕಾತು. ಈಗ ಹೋಗಿ ದಾಕ್ತರನ್ನ ಕರಕಂಡು ಬರಬೇಕಂತ. ಆ ಸುಡಗಾಡ ಮನಿ ಎಲ್ಲೈತೋ ಏನೋ (ನೋಡಿ) ಹಾ! ಈ ಗೋವ್ಯಾನ್ನ ಅಲ್ಲಿಗೆ ಕಳಿಸಿಬಿಡಬೇಕು. ಛೇ, ಬೇಡ, ಎಲ್ಲ ಹೂರಣ ಹೊರಗ ಬಿದ್ದ ಬಿಟ್ಟೇತ. ದಾರಿ ಅಷ್ಟ ಕೇಳಿಕೊಂಡ ಹೋಗತನಿ. (ಪ್ರಕಾಶಂ) ಏ ಗೋವಣ್ಣ.

ಗೋ:—ಹ! ಹ! ಯಾರವರು? ಆಗರ ಚಂಪೆಯೇನು? ಯಾಕೆ ಚಂಪಾ ಇಷ್ಟೊತ್ತಿನ್ಯಾಗ ಹೊಂಟಿ?

ಚಂಪಾ:—ನಿನಗೆ ಆ ದಾ (ಎಂದು ನಿಲ್ಲುವಳು)

ಗೋ:—ಹಾ! ಮುಂದೇನು! ನಡುವೇ ನಿಂತ್ಯಾಕೆ?

ಚಂಪಾ:—ಮೊನ್ನೇ ದಾಳಿಂಬ್ರಹಣ್ಣು ತಿಂದಿದ್ದಿಲ್ಲೇ, ಅದು.

ಗೋ:—ಇರಲಿ ಇದೆಲ್ಲ, ಆ ಡಾ....ಅಂದದ್ದು ಹೇಳು. ನನಗೆಲ್ಲಗೊತ್ತೈತಿ. ಇವತ್ತ ಹೇಳಿಬಿಡ್ತನಿ ರಾವಬಾದ್ದೂರ ಮುಂದ.

ಚಂಪಾ—ಏನ ಹೇಳ್ತೀ ಹೇಳು. (ಸ್ವಗತಂ) ಇವನೇನೋ ಬಾಯ್ಬಡಕ. ಹೇಳಿದ್ರೂ ಹೇಳಿಬಿಟ್ಟಾನು. ಸುಮ್ಮನ ಇವನಿಗೆ ಹೇಳಿಬಿಟ್ರ ನನಗೂ ತುಸ ಕೆಲಸ ಕಡಿಮೆ ಆಗಕತಿ. ಹೇಳಿ ಈಗ ಇವನ್ನ ದಾಕ್ತರರ ಹತ್ತರ ಕಳಸ್ತೇನಿ. (ಪ್ರ) ಬಿಡು ಸುಮ್ಮನ ಯಾಕ ಪೀಡಸ್ತೀ?

ಗೋ—ಆ ದಾ....ಅಂದದ್ದ ಹೇಳು. ನಾ ಯಾಕ ಪೀಡಸಲಿ.

ಚಂಪಿ—ಆ ದಾಕ್ತರರು ದಿನಾ ಬರತಾರಲ್ಲ.

ಗೋ—ಹಾ! ಅದನ್ನ ಹೇಳು. ಅವ ಬಂದ ಕೂಡ್ಲೆ ನನ್ಯಾಕ ಹೊರಗ ಕಳಸತಾರ!

ಚಂಪಿ—ಮುದುಕರು ಹರೇದ ಹೆಣ್ತಿನ ಮಾಡಿಕೊಂಡ್ರ ಅವರು ಹಿಂಗ ಯಾವನ ಕೂಡರ ಇರತಿರತಾರ.

ಗೋ—ಹಂಗಾರ, ನಾ ಹರೇದವ ಅದೇನಿ ನನ್ನ ಮದಿವಿ ಮಾಡಿಕೊಂ-ಡು ಬಿಡು.

ಚಂಪಿ—ಹಂಗಾರ ಹೋಗಿ ಆ ದಾಕ್ತರನ್ನ ಕರಕೊಂಡು ಬಾ.

ಗೋ—(ಸ್ವ) ಅಯ್ಯಯ್ಯಪ್ಪ! ಏನು ಬಿರಿ ಇದು ಲಗ್ನದ್ದು. ಮದಿವಿ ಮಾಡಿಕೋಬೇಕು ಅನ್ನುದರಾಗ ಹತ್ತಿತಲ್ಲ ಕೆಲಸ. ಅದಕ್ಕಂತ ಮದಿವಿಆದವ್ರ್ಯಾಲ ಬಾಯಿಗ್ಗಾಲ ಕಟ್ಟಿದ ಕುದುರೆ ಹಂಗ ಮುಸಿಹಿಡಿದು ಕುಂಡರತಾರ. (ಪ್ರ) ಛೀ ಛೀ ಮುದುಕರಿಗೆ ಹೆಂಡರ ಮ್ಯಾಲ ಸಂಶಯ. ನಮಗೇನು ಹರೇದರಿಗೆ ನೀನ ಹೋಗಿ ಬಾ.

ಚಂಪಿ—ಅವ್ರ ಮನಿ ಎಲ್ಲೈತಿ.

ಗೋ—ಇಗೋ ಹಿಂಗ ಹೋಗಿ ಅಲ್ಲಿ ತಿರಗಿ ಆ ಮುಡ್ಯಾಕ್ಯಾಗ ಬಿದ್ದಕ್ಯಾರ ಮುಂದ ಹೋಗು(ಎಂದು ಹೇಳ ಹೇಳುತ್ತ ಚುಂಬಿಸಲಿಕ್ಕೆ ಬರುವನು. ಚಂಪಿಯು ತಪ್ಪಿಸಿಕೊಂಡು ಹೋಗುವಳು.) ಆಃ! ಏನ ಚಾಲಪ ಹೆಂಗಸರದು. ಪಾಪ! ನಮ್ಮ ದಣೇರು ಹೆಣ್ತಿಮ್ಯಾಲ ನಂಬಿಗಿ ಇಟ್ಟು ದಾಕ್ತರಿಗೆ ಬರಾಕ ಹೇ-ಳ್ಯಾರ. ಇವರ ನೋಡಿದ್ರ ಇಂತ ಕೆಟ್ಟ ಕೆಲಸ ಮಾಡತಾರ. ಕಲತರೆಲ್ಲ ಹಿಂಗನ ಏನೋ. ದಣೇರಿಗೆ ತಿಳಿಸಬೇಕಂದ್ರ ಹೆದರಿಕಿ. ಇವರಿಗೆ ದೊಡ್ಡರ

ನ್ನದು ಅಷ್ಟ ನೈ. ಬರೇ ಹೇಳಿಕಿ ಮಾತ ಕೇಳತಿರತಾವ. ಮತ್ತ ನಮ್ಮ ಹೊಟ್ಟಿ ಮ್ಯಾಲ ಕಾಲು ಬಂದ್ರು ಬಂತ.

ಕಮಲಾ—(ಬಂದು) ಏ ಗೋವ್ಯಾ.

ಗೋ—ಯಾಕ ಅವ್ವನರ!

ಕಮಲಾ—ಲೈನಬಝಾರದಲ್ಲಿ ಸುಶೀಲಾಬಾಯಿಯ ಮನೆಗೆ ಹೋಗಿ ನನ್ನ ಕೇಸರಿ ಶಾಲು ತೆಗೆದುಕೊಂಡು ಬಾ.

ಗೋ—ಅಪ್ಪಣೆ.(ಕಮಲಾವತಿ ಹೋಗುವಳು) ಡಾಕ್ಟರು ಬರುಹೊತ್ತು ಆತ ಕಾಣತತಿ. ಬಂತ ಆಗಲಿ ಆಡರು, ನಮ್ಮನ್ನೆಲ್ಲರ ಕಳಸ್ಯಾಕ. ಸಾಕಪ್ಪ ಈ ಸಾವಕಾರ ಮನಿ ಹೆಂಗಸರ ಕಾಟ. ನಾ ಹೊರಗ ಹೋದರ ಸಾಕು. ಎಲ್ಲರ ಹೋಗಿ ಕುಂತು ಬಂದರಾತು. (ಹೋಗುತ್ತಿರುವಷ್ಟರಲ್ಲಿ ಚಂಪಿಯು ಬಂದು ತಡಹಾಯುವಳು.) ಹೌದಲೇ ಹೆಣ್ಣೇ.

**ಲಾವಣಿ**—ಹೆಂಗ ಮಾಡಬೇಕು ಇವಳ ಸೋಗು ನೋಡಿ ಸುಮ್ಮನಾಗಿ ಹೋಗುವಂಗ ಆಗುವಲ್ಲದಯ್ಯ ಸಾಂಬ | ಯೋಗಿ ಜನಕ್ಕಗೆ ಬಾಯಬೀಗ ಹಾಕಿ ದಳು ಎಂದು ಕೂಗುತೈತಿ ಶಾಸ್ತ್ರಾಗಮ ತುಂಬಾ. ( ಎಂಬ ಲಾವಣಿ ಹೇಳುತ್ತ ಹೋಗುವನು.)

ಡಾ. ವಸಂತ (ಪ್ರವೇಶಿಸಿ)—"ಬಲವಾನಿಂದ್ರಿಯಗ್ರಾಮೋ ವಿದ್ವಾಂಸ ಮಪಿಕರ್ಷತಿ" ಎಂಬ ವ್ಯಾಸಮಹರ್ಷಿಗಳ ವಾಕ್ಯವನ್ನು ಜಿತೇಂದ್ರಿಯರಾದ ಜೈಮಿನಿಗಳು ಸಹ ತಿದ್ದಲಿಕ್ಕೆ ಹೋಗಿ ಕೈಯೂರಿದರು. ಎಂದಮೇಲೆ ತಾವು ಸಾಹಾರಿಗಳಾದ ನಮ್ಮಂಥವರ ಪಾಡೇನು? ಈಗ ನಾನು ಮಾಡುತ್ತಿರುವದು ಅಕಾರ್ಯವೆಂದು ನನ್ನ ಮನಸ್ಸೇ ನನಗೆ ಹೇಳುತ್ತದೆ. ಆದರೆ ಕೆಲವು ತಪ್ಪುಗಳ ವಿಲಕ್ಷಣ ವಿಶೇಷವೆಂದರೆ ಮೇಲಿಂದ ಮೇಲೆ ಅವು ಘಟಿಸುವದರಿಂದ ಮನಸ್ಸಿಗೆ ಒಂದು ತರಹದ ಆನಂದವಾಗುತ್ತಿರುತ್ತದೆ. ಪತಿಯು ಮನೆಯಲ್ಲಿಲ್ಲದಿರುವಾಗ ಏಕಾಕಿನಿಯಾದ ಪತ್ನಿಯ ಭೆಟ್ಟಿಗೆ ಹೋಗುವದು ಬಹಳ ದೊಡ್ಡ ತಪ್ಪು; ಆದರೆ ಆ ಸ್ತ್ರೀಯು ತರುಣಿಯೂ ಸುಂದರಿಯೂ ಆಗಿದ್ದಳೆಂದರೆ, ಸಾವಿರಸಾರೆ ನಿಶ್ಚಯ ಮಾಡಿದರೂ ಈ ತಪ್ಪು ತನ್ನಿಂದ ತಾನೇ ಆಗೇ ಆಗುತ್ತದೆ. ನನ್ನ ಮಾತು ಹಾಗಿರಲಿ, ನನಗೆ ವಿಶೇಷವಾಗಿ ಬ್ರುದ್ಧಿವಾದವನ್ನು ಹೇಳಿದ ಕಮಲೆಯ ಸದಸದ್ವಿವೇಕ ಬುದ್ಧಿಯು ಈ ಜಾರಕರ್ಮಕ್ಕೆ ಹೇಗೆ ತೊಡಗಿಸಿತು? ಇದೆಲ್ಲ ಆ ಯೌವನದ ಹುಟ್ಟುಗುಣ. ತಪಸ್ವೀ ಜನರೊಡನೆ ಸಾತ್ವಿಕ ಭಾವದಿಂದ ಬೆಳೆದ ಆ ಶಕುಂ

ತಲೆಯು ದುಷ್ಯಂತನನ್ನು ನೋಡಿದ ಕೂಡಲೆ ಕಾಮಬಾಣಾಹತಳಾದ ಯೌವನ ಮದದಿಂದಲ್ಲವೇ? ಶಕುಂತಲೆಯ ಸಾತ್ವಿಕಭಾವದ ಎದುರಿಗೆ ಕಮ ವತಿಯೆಂದರೆ ಕೇಪದಾರ್ಥ! ಆದರೆ ಇಷ್ಟುಮಾತ್ರ ನಿಜ, ಈ ಕಮಲೆಗೆ ರೂಪ ತರುಣ ಪತಿಯು ಸಿಕ್ಕಿದ್ದರೆ ಈ ರೀತಿ ಅಡ್ಡಹಾದಿ ಬೀಳುತ್ತಿದ್ದಿಲ್ಲವೇ ಆತ್ಮಸಾಕ್ಷಿಯಾಗಿ ಹೇಳುತ್ತೇನೆ. ನಿಜವಾಗಿ ಇಂಥ ತರುಣಿಯರು ವ್ಯಭಿ ಮಾಡಿದರೆ ಅದರ ದೋಷವೆಲ್ಲ, ಧನಲೋಲುಪರಾಗಿ ಮುದುಕನಿಗೆ ಮಗಳ ಕೊಟ್ಟ ತಾಯಿ-ತಂದೆಗಳಿಗೆ ಮತ್ತು ತನಗೆ ಸಂಸಾರವನ್ನು ನಡೆಯಿಸುವ ಯಿಲ್ಲದೆ ಅಂಥವಳನ್ನು ಮಾಡಿಕೊಂಡ ಮುದುಕರಿಗೆ! ನಾನಿಷ್ಟೆಲ್ಲ ಹೇಳ ದ್ದರೂ ಮನಸ್ಸನ್ನು ಜಯಿಸುವದು ಅಶಕ್ಯವಾಗಿದೆ. ಯಾಕಂದರೆ—

ಪದ —'ಏರಿಮಮೇರಾ ಮನೋಹರಲೀಲಾ' ಎಂಬಂತೆ.

ಹಾರುವುದೀಗ ವಾನರ ಮನವು| ಘೋರಭವಾಟವಿ ವಿಷಯತರುಗಳೊ
ತರುಣೀ ಜನದಿಂ ಪರತಿಯೊಳೊಮ್ಮೆ | ನರಪಾಲನ ಸಿಂಹಾಸನಕೆ ಸದಾ ||

ಆದರೆ ಈ ಪಾಪದ ಫಲವನ್ನು ಈಗಾಗಲೇ ಉಣ್ಣಹತ್ತಿರುವೆನು. ಯಾ ದರೆ, ಹಗಲಿರುಳು ಒಂದೇಸವನೆ ಕಮಲೆಯ ವಿಚಾರಗಳೇ ನಡೆದಿರುವದ ರೋಗಿಗಳ ಉಪಚಾರದ ಕೆಲಸವು ಸರಿಯಾಗಿ ನಡೆಯದೆ, ಗಿರಾಕಿಗಳು ಬರು ಕಡಿಮೆಯಾಗಿ ಅನ್ನಕ್ಕೆ ಅಭಾವವಾಗಹತ್ತಿದೆ. ಆದರೂ ಮನಸ್ಸು ಹಿಂದಿ ಲೊಲ್ಲದು. ಆಗುವದೆಲ್ಲವೂ ಆಗಲಿ, ನಾವಿಬ್ಬರೂ ಈ ವ್ಯಭಿಚಾರದಿಂದ ಕಕ್ಕೆ ಬಿದ್ದರೂ ಅಡ್ಡಿಯಿಲ್ಲ; ಇದನ್ನು ನೋಡಿ ಮಾತ್ರ ಮುದುಕರು ಮ ಯಾಗುವದನ್ನು ಬಿಟ್ಟರೆ ಆ ನನ್ನ ಭಗಿನಿಯರ ಪಾತಿವ್ರತ್ಯವನ್ನು ಕಾಯ್ದು ಪು ಬಂದರೂ ಬರಬಹುದು. ಬೇಗನೆ ಹೋಗಿ ಕೆಲಸವೇನೋ ಕೇಳಿಕೊ ಬರುವೆನು. (ಎಂದು ಹೋಗುವನು.)

## ಪ್ರವೇಶ—೩

(ಸ್ಥಳ— ಮಹಾಲು; ಕಮಲಾವತಿಯು ಕುಳಿತಿರುವಳು.)

ಕಮಲಾವತಿ—ಇನ್ನೂವರೆಗೆ ಡಾಕ್ಟರರು ಏಕೆ ಬರಲಿಲ್ಲ? ಅ ಮನಸ್ಸಿನಲ್ಲೇನಾದರೂ ತಿಳಕೊಂಡರೋ ಏನೋ? ಈ ಮುದುಕನನ್ನು ಕೊಂಡಮೇಲೆ ಎಳ್ಳಷ್ಟೂ ಹೊರಗಿನ ಜಗತ್ತಿನ ಪರಿಚಯವೇ ಇಲ್ಲದಾಗಿದೆ. ಬಗೆಯಾಗಿ ನನ್ನನ್ನು ಆತಂಕದಲ್ಲಿಟ್ಟರೆ ನನ್ನ ಪಾತಿವ್ರತ್ಯವು ಸುರಕ್ಷಿತವಾಗಿರ

ದೆಂದು ಇವನ ತಿಳುವಳಿಕೆಯಿದೆ. ರಾಜಪ್ರಾಸಾದವೂ ಕೋಟಿಕೊತ್ತಳಗಳೂ ಸಹ ಪಾತಿವ್ರತ್ಯವನ್ನು ರಕ್ಷಿಸಲು ಶಕ್ತವಾಗುವದಿಲ್ಲವೆಂದ ಮೇಲೆ ಈ ಮುದುಕ ನೆಷ್ಟು ಕಾಯುವನು? ಇದನ್ನು ತಿಳಿಯದೆ ಎಷ್ಟೋ ಗಂಡಸರು ಹೊರಗೆ ಹೋಗುವಾಗ ಹೆಂಡಿರನ್ನು ಒಳಗೆ ಹಾಕಿ ಬೀಗಮುದ್ರೆ ಮಾಡಿ ಹೋಗುವರು. ಇಂಥವರು ತಾವಾಗಿಯೇ ಅಡ್ಡಹಾದಿಗೆ ಹಚ್ಚಿದಂತಾಗುವದು. ಸ್ತ್ರೀಯರನ್ನು ತಮ್ಮ ಗುಣ ಮತ್ತು ಪ್ರೇಮಬಲದಿಂದ ಒಲಿಸಿಕೊಳ್ಳಬೇಕಲ್ಲದೆ, ಬಲಾತ್ಕಾರವು ಸ್ತ್ರೀ ವಶೀಕರಣಕ್ಕೆ ಸಾಧನವಲ್ಲ. (ವರ್ತಮಾನಪತ್ರವನ್ನು ನೋಡುವಳು.) ಪಟವರ್ಧನ ಸರ್ಕಸ್ಸು. ಆಃ! ಎಂಥ ಮನೋಹರ ಕಸರತ್ತುಗಳು? ಎಷ್ಟು ಚಮತ್ಕಾರದ ಕೈಕೆಲಸಗಳು! ಪಶುಗಳ ನೋಟವಂತೂ ಬಹು ಚಿತ್ತಾಕರ್ಷಕವಾಗಿರುವದು. ಆದರೆ ಮುದುಕನನ್ನು ಮಾಡಿಕೊಂಡು ತುರಂಗವಾಸವನ್ನನುಭವಿಸುತ್ತಿರುವ ನನಗೆ ಇವುಗಳ ಯೋಗವೆಲ್ಲಿ? (ಅಷ್ಟರಲ್ಲಿ ಡಾಕ್ಟರರು ಬರುವರು) ಬರಬೇಕು.

ಡಾ. ವಸಂತ—ತಮ್ಮ ಪ್ರಕೃತಿಯು ಹೇಗಿದೆ?

ಕಮಲಾ—ಸುಧಾರಿಸಹತ್ತಿದೆ. ಇನ್ನೇನೂ ಅಂಜಿಕೆಯಿಲ್ಲ; ಕೈಯಲ್ಲಿ ಏನದು?

ಡಾ. ವಸಂತ—ಚಿತ್ತರಂಜನ ನಾಟಕದ ಜಾಹೀರಾತು. ಓಹೋ ಮರೆತಿದ್ದೆ. ಬಾಯಿ, ಎಂದಾದರೂ ನೀವು ಚಿತ್ತರಂಜನ ನಾಟಕಸಭೆಯನ್ನು ನೋಡಿರುವಿರೇನು?

ಕಮಲಾ—ಎಲ್ಲಿಯ ಆಟ, ಎಲ್ಲಿಯ ನೋಟ ಡಾಕ್ಟರ! ನಮ್ಮ ಮನೆಯವರಿಗೆ ಇದು ಯಾವದೂ ಬೇಡ. ಎಂದೆಂದೂ ನಾಟಕವಿಲ್ಲ, ಸಿನೇಮಾ ಇಲ್ಲ, ಸರ್ಕಸ್ಸು ಇಲ್ಲ; ಬಹಳವೇನು? ಯಾವುದಕ್ಕೂ ಹೊರಗೆ ಹೋಗುವದಕ್ಕೆ ಕಳ್ಳಾಟ. ಏನೋ ಕರ್ನಾಟಕ ರಂಗಭೂಮಿಯನ್ನು ನೋಡಿಯೇ ಅಲ್ಪ ಸ್ವಲ್ಪ ಸಂಗತಿಗಳನ್ನು ತಿಳಕೊಳ್ಳಬೇಕು.

ಡಾ. ವಸಂತ—ನೀವು ಧಾರವಾಡದಲ್ಲಿದ್ದು ನಾಟಕವನ್ನು ನೋಡಲಿಲ್ಲವೆಂದು ಪರಮಾಶ್ಚರ್ಯ.

ಕಮಲಾ—ಡಾಕ್ಟರ, ಈ ಜಗತ್ತೆಲ್ಲ ನಾಟಕವೇ. ಇದರಲ್ಲಿ ನಾವೇ ಪಾತ್ರಗಳು, ಎಂದಮೇಲೆ ಹೊಸದಾಗಿ ನೋಡುವದೇನು? ಈ ಸಂಸಾರದ ಚಿತ್ರವನ್ನೇ ನಾಟಕರೂಪದಲ್ಲಿ ರೇಖಿಸಿದರೆ ಅದಕ್ಕೊಂದು ವಿಶಿಷ್ಟ ಹೆಸರು ಬರುತ್ತದೆ, ಇಷ್ಟೇ.

ಡಾ. ವಸಂತ—ಹಾಗಾದರೆ ನಾಳೆ ನಾಟಕಕ್ಕೆ ಹೋಗೋಣ. ನಾಲ್ಕನೆಯ ಅಂಕಿನಲ್ಲಿ ಕನ್ನಡ ಮನಮೋಹನನ ಕೆಲಸವನ್ನು ನೋಡಿ ನೀವು ಬೆರಳು ಕಚ್ಚೀರಿ. ಕೆಲಕೆಲವರಿಗಂತೂ ಹುಚ್ಚೇ ಹಿಡಿಯುವದು.

ಕಮಲಾ—ಆದರೆ ಅದು ನಮ್ಮ ದೈವದಲ್ಲಿಲ್ಲ. ಅವರೆದುರಿಗೆ ನಾಟಕದ ಹೆಸರನ್ನೆತ್ತಲಿಕ್ಕೆ ಸಹ ಹೆದರಿಕೆ ಬರುತ್ತದೆ. ಆಫೀಸಿನಲ್ಲಿ ಅಷ್ಟು ದುಡಿದು ದಣಿದು ಬಂದಮೇಲೆ ಇದರ ಹೆಸರನ್ನು ತೆಗೆಯುವದೇ ಕಷ್ಟ.

ಡಾ. ವಸಂತ—ನಾಳೆ ಅಮಾವಾಸ್ಯೆಯ ಸಲುವಾಗಿ ಎಲ್ಲ ನಾಟಕಗಳೂ ಹಗಲು ನಡೆಯುವವು.

ಕಮಲಾ—ಹಾಗಿದ್ದರೆ ಮತ್ತಿಷ್ಟು ತೊಂದರೆ. ರಾತ್ರಿಯಲ್ಲಿ ಅನುಕೂಲ ತೆಯಿದ್ದಾಗಲೇ ನಾಟಕಕ್ಕೆ ಹೋಗದವರು ಮುದ್ದಾಂ ಇದಕ್ಕಾಗಿಯೇ ಆಫೀಸು ಬಿಟ್ಟು ಬರುವದಂತೂ ಎಂದೆಂದಿಗೂ ಆಗದ ಮಾತು.

ಡಾ. ವಸಂತ—ಆದರೆ ನಾನು ರಜೆತಕೊಳ್ಳುವ ಸುದ್ದಿಯನ್ನೇ ಹೇಳುವದಿಲ್ಲ.

ಕಮಲಾ:—ನೌಕರ-ಚಾಕರರು ಇವರು ಇಲ್ಲದಾಗ ಸರಿಯಾಗಿ ಕೆಲಸ ವನ್ನು ಮಾಡುವದಿಲ್ಲ. ಆದ್ದರಿಂದ ನಾಟಕಕ್ಕೆ ಹೋಗಬೇಕಾದರೆ ಆಫೀಸಿಗೆ ರಜೆ ಕೊಡಬೇಕಾಗುತ್ತದೆ.

ಡಾ. ವಸಂತ:—ಆದರೆ ನನ್ನ ಅಭಿಪ್ರಾಯವು ಬೇರೆಯಾಗಿದೆ.

ಕಮಲಾ:—ಎಂದರೆ?

ಡಾ. ವಸಂತ:—ನಾವು ನಾಳೆ ಮಧ್ಯಾಹ್ನನಾಟಕಕ್ಕೆ ಹೋದರೆ ರಾವ ಬಹಾದ್ದೂರರು ಆಫೀಸಿನಿಂದ ಬರುವದರೊಳಗೇ ನಾವು ತಿರುಗಿ ಬರಬಹುದು. ಇದಲ್ಲದೆ ಮೃಚ್ಛಕಟಿಕದಲ್ಲಿ ನಾಲ್ಕನೆಯ ಅಂಕದವರೆಗೆ ನೋಡಿದರೆ ಸಾಕು.

ಕಮಲಾ:—(ಸ್ವಗತಂ) ಅಬ್ಬಬ್ಬಾ! ಇದೇನು ಪಾಪದ ವಿಚಾರವೋ ಪುಣ್ಯದ ವಿಚಾರವೋ? ಇದೇನು ಸುಖವೋ ದುಃಖವೋ? ಛೀ, ಇದರಲ್ಲಿ ಲಕ್ಷ್ಯವು ನೆಟ್ಟಗೆ ಕಾಣುವದಿಲ್ಲ. ಒಲ್ಲೆನೆಂದು ಹೇಳಿಬಿಡುವದೇ ನೆಟ್ಟಗೆ; ಛೀ ಛೀ, ನಾಟಕಕ್ಕೆ ಡಾಕ್ಟರರೊಡನೆ ಹೋದಮಾತ್ರಕ್ಕೆ ಅಲ್ಲಿ ನನ್ನನ್ನು ಗುರುತಿಸುವವರಾದರೂ ಯಾರು? ಗುರ್ತುಹಿಡಿದರೂ ಅದರಲ್ಲಿ ಪಾಪವೇನು? ನಾಟಕಕ್ಕೆ ಹೋಗುವದು ಒಂದು ಪಾಪವೇ ಆಗಿದ್ದರೆ, ಈ ಧಾರವಾಡದಲ್ಲಿ ನಾಟಕಕ್ಕೆ ಹೋಗುವ ಬರುವ ಜನರೆಲ್ಲ ಪಾಪಿಗಳೇ ಏನು? ನಾಳೆ ನಾಟಕಕ್ಕೆ ಹೋಗಲು ಅಡ್ಡಿಯಿಲ್ಲ. ಆದರೆ ಬಹಳ ಎಚ್ಚರಿಕೆಯಿಂದಿರಬೇಕು. ಬೇಡ ಬೇಡ, ನನ್ನ ದುರ್ದೈವದಿಂದ

ಇಷ್ಟಾದದ್ದೇ ಸಾಕು. ನಾನು ಬರುವದಿಲ್ಲೆಂದು ಡಾಕ್ಟರರಿಗೆ ಹೇಳಿ ಬಿಡಬೇಕು. (ಪ್ರಕಾಶಂ) ಡಾಕ್ಟರ?

ಡಾ. ವಸಂತ:—ಯಾಕೆ ಏನು ನಿಶ್ಚಯ ಮಾಡಿದಿರಿ?

ಕಮಲಾ:—ಆದರೆ ಡಾಕ್ಟರ............

ಡಾ. ವಸಂತ:—ಅಗೋ ನಾನು ನಿಮಗೆ ಹೇಳುವದನ್ನು ಮರೆತೆನು, ಒಂದು ಸಂಗತಿಯನ್ನು.

ಕಮಲಾ:—ಅದೇನದೇನು?

ಡಾ. ವಸಂತ:—ಈ ನಾಟಕವು ಇತ್ತೀಚೆಗೆ ಹೊರಟಿದೆ. ಇದರಲ್ಲಿ ಎಲ್ಲರೂ ದೊಡ್ಡ ದೊಡ್ಡ ಪರೀಕ್ಷೆಯಾದ ಸುಶಿಕ್ಷಿತರೇ ನಟರಾಗಿರುವರು.

ಕಮಲಾ:—ಹಾಗಾದರೆ ನಾಟಕದಿಂದ ಇವರ ಸುಶಿಕ್ಷಿತತನಕ್ಕೆ ಭಂಗ ಬರಬಹುದು!

ಡಾ. ವಸಂತ:—ಈಗ ಕಲ್ಪನೆಯು ಮಾತ್ರ ಹಾಗಾಗಿರುವದು ನಿಜ. ಯಾಕೆಂದರೆ ಕಾಲಚಕ್ರದ ಗತಿಗನುಸರಿಸಿ ನಾಟ್ಯಕಲೆಗೂ ಅವನತಕಾಲವು ಬಂದಿರುತ್ತದೆ. ಮೊದಲು ಈ ನಾಟಕಕ್ಕೆ ರಾಜಾಶ್ರಯವಿರುತ್ತಿತ್ತು. ದೊಡ್ಡ ದೊಡ್ಡ ಕವಿಗಳೇ ನಾಟಕವನ್ನು ಬರೆಯುತ್ತಿದ್ದರು; ಮತ್ತು ಆಸ್ಥಾನಗಾಯಕರೂ ನಾಟ್ಯಶಾಸ್ತ್ರವನ್ನು ಅಭ್ಯಾಸಮಾಡಿದವರೂ ಇದರಲ್ಲಿ ನಟರಾಗುತ್ತಿದ್ದರು. ಅಂತೆಯೇ ನಾಟಕಗಳು ಒಳ್ಳೇಸ್ಥಿತಿಯಲ್ಲಿದ್ದವು. ಆದರೆ ಈಗ ನಾಟಕವು ಹೊಟ್ಟೆ ತುಂಬಿಕೊಳ್ಳುವ ಉದ್ಯೋಗವಾಗಿರುವದರಿಂದ ಅದರ ತತ್ವವೆಲ್ಲ ಅಳಿದುಹೋಗಿ ಅವಿವೇಕವು ತುಂಬಿಹೋಗಿದೆ. ಮಾಲಕರಿಗೆ ನಾಟಕದ ವಿಷಯವು ಗೊತ್ತಿರುವದಿಲ್ಲ. ನಟವರ್ಗವಂತೂ ಕೇವಲ ಉಡಾಳ. ಸಮಾಜದಲ್ಲಿ ಸಕಲಗುಣಸಂಪನ್ನರಾಗಿ ಛೀಮಾರಿಯಾದಮೇಲೆ ನಾಟಕದಲ್ಲಿಸೇರುವ ನಟವರ್ಗವೇ ಬಹಳ. ನಾಟಕಕಾರರಂತೂ ಅತಿ ವಿಲಕ್ಷಣರಾಗಿದ್ದಾರೆ. ಮನಸಿಗೆ ಬಂದ ಎರಡು ಅಬದ್ಧ ಕಥೆಗಳನ್ನು ಕೂಡಿಸಿ ಕೌದಿಯ ತ್ಯಾಪಿಯಂತೆ ಹಾಗೂ ಹೀಗೂ ಕಥೆಯನ್ನು ಮುಗಿಸಿಬಿಟ್ಟರೆ ತೀರಿತು. ಇದರಿಂದ ಉತ್ತಮ ನಾಟಕ ಕಂಪನಿಗೂ ಮಾನವು ಸಿಗದಂತಾಗಿದೆ.

ಕಮಲಾ:—ಹೌದು. ನಾಟಕವು ಅತಿ ಶ್ರೇಷ್ಠವಾದದ್ದು ನೀತಿಯನ್ನು ಬೋಧಿಸಲಿಕ್ಕೆ. ಅದಕ್ಕೆಂದೇ 'ಕಾವ್ಯೇಷು ನಾಟಕಂ' ಎಂದು ಹೇಳುವರು. ಪ್ರವೃತ್ತಿ ನಿವೃತ್ತಿಯನ್ನುಂಟುಮಾಡಲಿಕ್ಕೆ ನಾಟಕವು ಅತಿ ಸಹಾಯಕವಾಗುವದು.

ನಮ್ಮಲ್ಲಿ ಈಗ ಹೇಳಿಕೊಳ್ಳುವಂಥ ಕಂಪನಿಗಳು ಯಾವವೂ ಇಲ್ಲ. ಈಗ ನಾಟ್ಯ ಕಲೆಯು ಬೆಳೆಯುಬೇಕಾದರೆ ನಾಟಕಕಾರರೂ, ನಟರೂ, ಪ್ರೊಪ್ರಾಯ್ಟರರೂ ಸುಶಿಕ್ಷಿತರಿರಬೇಕಾಗುವದು. ಆದರೆ ನಮ್ಮಲ್ಲಿ ಸುಶಿಕ್ಷಿತರಿಗೆ ಅಷ್ಟು ಅವಕಾಶ ವೆಲ್ಲಿದೆ?

ವಸಂತ:—ಅದೆಲ್ಲ ನಿಜ. ಈ ಚಿತ್ರರಂಜನ ನಾಟಕಕಂಪನಿಯುವರು ಎಲ್ಲರೂ ಸುಶಿಕ್ಷಿತರಿರುವರಲ್ಲದೆ, ಅವರು ಮಾತೃಸೇವೆಯನ್ನೇ ಧ್ಯೇಯವಾಗಿಟ್ಟು ಕೊಂಡು ತಮ್ಮ ಕೆಲಸವನ್ನು ಮಾಡಿ ಉಳಿದ ವೇಳೆಯಲ್ಲಿ ಈ ಕೆಲಸಕ್ಕೆ ಕೈಹಾಕಿ ಪ್ರಯೋಗಗಳನ್ನು ಮಾಡುವರು. ಇದರಲ್ಲಿಯು ಎಷ್ಟೋ ಹಣವು ಸಮಾಜ ಸೇವೆಗಾಗಿ ವೆಚ್ಚವಾಗತಕ್ಕದ್ದದೆ. ಆದ್ದರಿಂದ ಇಂಥ ಸಮಾಜಸೇವಕ ಕಂಪನಿ ಗಳಿಗೆ ಉದಾರಾಶ್ರಯ ಕೊಡುವದು ಪ್ರತಿಯೊಬ್ಬ ಸುಹೃದಯನ ಮತ್ತು ದೇಶ ಭಕ್ತನ ಕೆಲಸವು. ಆದರೆ ಇಂಥ ಸತ್ಕಾರ್ಯಗಳಿಗೆ ಸಹ ವಿಘ್ನವನ್ನು ತರುವ ಎಷ್ಟೋ ಪುಣ್ಯವಂತರು ಇದ್ದಾರೆ. ಅಂಥವರನ್ನು ಹುಟ್ಟಿಸಿದ್ದು ಬ್ರಹ್ಮನ ತಪ್ಪಲ್ಲದೆ ಪಾಪ ಆ ಜಡಮತಿಗಳ ತಪ್ಪಲ್ಲ.

ಕಮಲಾ:—ಮಹಾರಾಷ್ಟ್ರದೇಶದಲ್ಲಿ ಕೆಲಕೆಲವು ಸಂಯುಕ್ತ ನಾಟಕ ಗಳೂ ಆಗುತ್ತಿರುವವಲ್ಲವೇ?

ವಸಂತ:—ಅಲ್ಲಿ ಈ ಗಾಯನ ನಾಟ್ಯವಿದ್ಯೆಯಲ್ಲಿ ಪ್ರವೀಣರಾದವರೂ, ಸುಶಿಕ್ಷಿತರೂ ಬಹಳ. ಅವರಿಗೆ ದೇಶಸೇವೆಯ ಕಡೆಗೆ ಲಕ್ಷ್ಯ ಬಹಳ. ಆದುದ ರಿಂದ ಆ ನಟರು ಅಸೂಯೆಯನ್ನು ಬಿಟ್ಟು ಯಾವದೊಂದು ಫಂಡು ಮುಂತಾ ದ್ದನ್ನು ಕೂಡಿಸುವಾಗ ಎಲ್ಲ ಪ್ರಸಿದ್ಧ ಕಂಪನಿಯ ಮುಖ್ಯ ನಟರು ಕೂಡಿ ಒಂದು ನಾಟಕವನ್ನು ಮಾಡಿ ಅದರ ಉತ್ಪತ್ತಿಯನ್ನು ಯಾವದೊಂದು ಸಮಾಜಹಿತ ಕಾರ್ಯಕ್ಕೆ ವೆಚ್ಚಮಾಡುವ ರೂಢಿಯು ಮೊದಲಿನಿಂದಲೂ ಅವರಲ್ಲಿದೆ. ನಮ್ಮಲ್ಲಿ ಸುಶಿಕ್ಷಿತರೇ ಆ ಕೆಲಸಕ್ಕೆ ಕೈಹಾಕಿಲ್ಲ. ಅಲ್ಲದೆ ನಮ್ಮ ಕರ್ನಾಟಕದಲ್ಲಿ ಅಜ್ಞಾ ನವೂ ಅಸೂಯೆಯೂ ಹೆಚ್ಚಾಗಿರುವದರಿಂದ ಅಂಥ ವಿದ್ವಾಂಸರಿಗೆ ಸಹಾಯ ಮಾಡುವದನ್ನು ಬಿಟ್ಟು ಕೈಲಾದನುಟ್ಟಿಗೆ ಹಿಂದೆ ಜಗ್ಗಲು ಪ್ರಯತ್ನಿಸುತ್ತಾರೆ. ಈ ಅಸೂಯೆಯ ಮೂಲಕವಾಗಿಯೇ ನಮ್ಮಲ್ಲಿ ಸಂಯುಕ್ತನಾಟಕಗಳಾಗುವ ಯೋಗವು ಒದಗಿಲ್ಲ. ಆದರೂ ಈ ಬಗೆಯ ಕಂಪನಿಗಳು ಕೆಲವಾದರೂ ಹುಟ್ಟಿ ದ್ದರೆ ಸಂಯುಕ್ತನಾಟಕ ಮಾಡುವ ಪ್ರಸಂಗವು ತೀವ್ರವೇ ಬರುವದು.

ಕಮಲಾ:—ಹಾಗಾದರೆ ನಾಳಿನ ನಾಟಕವು ಬಹಳ ಮನೋಹರವಾಗಿ

ಆಗುತ್ತಿರಬಹುದಲ್ಲವೇ?

ವಸಂತ:—ಅದನ್ನು ಬಾಯಿಂದ ಎಷ್ಟು ಹೇಳಿದರೂ ತೀರದು. ಪ್ರತ್ಯಕ್ಷ ನೋಡಿಯೇ ತಿಳಕೊಳ್ಳಬೇಕು.

ಕಮಲಾ—ಹಾಗಾದರೆ ಇಂಥ ನಾಟಕವನ್ನು ನೋಡುವ ಯೋಗವು ಪುನಃ ಒದಗಲಿಕ್ಕಿಲ್ಲಲ್ಲವೆ?

ವಸಂತ—ನಿಜ. ಯಾಕೆಂದರೆ ಅವರು ತಮಗೆ ಸಿಗುವ ಬೇಸಿಗೆ ಚಳಿಗಾಲಗಳ ರಜೆಗಳಲ್ಲಿ ಈ ಕೆಲಸವನ್ನು ಮಾಡತಕ್ಕವರೆಂದ ಮೇಲೆ ಬೇಕಾದಾಗ ನೋಡಲಿಕ್ಕೆ ಸಿಗಲಾರದು.

ಕಮಲಾ—ಆದರೆ....

ವಸಂತ—ಆದರೆ ಗೀದರೆ ಏನೂ ಬೇಡ. ನಿಮ್ಮ ಮಾತು ತಿಳಿಯಿತು. ಇಗೋ ರಿಝರ್ವಖುರ್ಚಿಯ ಟಿಕೀಟ ತೆಗೆದುಕೊಳ್ಳಿರಿ. ನಾಳೆ ನಾನು ಬರುವದರೊಳಗೆ ಮಾತ್ರ ಸಿದ್ಧವಾಗಿರಬೇಕು.

ಕಮಲಾ—(ಸ್ವಗತಂ)ಎಷ್ಟು ಉದಾರಮನಸ್ಸಿದು! (ಪ್ರಕಾಶಂ) ಆಗಲಿ. ತಾವು ಮಾತ್ರ ತಪ್ಪದೆ ಬರಬೇಕು.

ವಸಂತ—ತಮ್ಮ ಇಚ್ಛೆಯನ್ನು ಮುರಿಯುವದೆಂದರೇನು? ತಪ್ಪದೆ ಬರುತ್ತೇನೆ. (ಹೋಗುತ್ತಾನೆ.)

ಕಮಲಾವತಿ—ಆಃ! ಎಂಥ ರಸಿಕತನವಿದು! ಇಂಥ ಪತಿಯೊಡನೆ ಬಾಳ್ವೆ ಮಾಡುವ ಸ್ತ್ರೀಯು ಎಷ್ಟು ಸುಖದಿಂದಿರಬಹುದು? ಪತಿ-ಪತ್ನೀ ಪ್ರೇಮವು ಸರಿಯಾಗಿದ್ದರೆ ಕದನ್ನವನ್ನು ಸಹ ತಿಂದು ಜೀವಿಸಬಹುದು. ಹರಕು ಮುರುಕು ಗುಡಿಸಲಲ್ಲಿದ್ದು ಬಾಳ್ವೆ ಮಾಡಬಹುದು. ನೆಲದ ಮೇಲೆ ಸಹ ಮಲಗಿ ಕಾಲ ಕಳೆಯಬಹುದು; ಆದರೆ ನನ್ನಂತೆ ಮುದುಕ ಗಂಡನನ್ನು ಮಾಡಿಕೊಂಡವರಿಗೆ ಎಷ್ಟು ಶ್ರೀಮಂತಿಕೆಯಿದ್ದರೇನು! ಒಂದು ವೇಳೆ ಗಂಡನು ಸತ್ತಿದ್ದರೆ ನಿರಾಶೆಯಿಂದ ನಿಶ್ಚಿಂತರಾಗಿ ಕಾಲಕಳೆಯಬಹುದು; ಆದರೆ ಇಂಥ ಅಸಮರ್ಥ ಅರಸಿಕ ಪತಿಯೊಡನೆ ಬಾಳ್ವೆಮಾಡುವದು ಬಹುಕಷ್ಟ! ಪರಮಾತ್ಮಾ, ಇಂಥ ಸ್ಥಿತಿಯನ್ನು ನನ್ನ ಯಾವ ಅಕ್ಕತಂಗಿಯರಿಗೂ ತರಬೇಡ. ಯಾಕಂದರೆ—

ಪದ—"ಇವನೇ ಗಿರಿಜಾರಮಣನೇ" ಎಂಬಂತೆ.

ಪತಿಯೇ ಪ್ರಮದಾ ಸುಖಗಳ ನೆಲೆಯು | ಪ್ರೇಮಾರ್ದ್ರ ನೆಲೆಯು||
ಪತಿಯೇ ವನಿತೆಯರ ಜೀವ | ಪ್ರೇಮಾತ್ಮ ಪತಿದೇವನೆ || ೧ ||

ವಿನಾಯಕ—(ಬಂದು) ಕಮಲಾವತಿಯು ಪ್ರಕೃತಿಯಂತೂ ಸುಧಾರಿಸುತ್ತ ನಡೆದಿದೆ. ಆದರೆ ಮನಸ್ಸು ಮಾತ್ರ ಮೊದಲಿದ್ದಂತೆ ಇಲ್ಲ. ಕಾರಣವೇನೋ ತಿಳಿಯದು. ಆದರೂ ಪರಪುರುಷರನ್ನು ನಾವಿಲ್ಲದ ವೇಳೆಯಲ್ಲಿ ಮನೆಗೆ ಬರಗೊಡುವದು ನೆಟ್ಟಗಲ್ಲ. ಪ್ರತ್ಯಕ್ಷ ಕಂಡರೂ ಪ್ರಮಾಣಿಸಿನೋಡಬೇಕು. ಒಮ್ಮೆಲೆ ಹೀಗೆ ಸಂಶಯಪಡುವದು ಸರಿಯಲ್ಲ. ಆದರೆ ಇನ್ನು ಮೇಲೆ ಮೊದಲಿನಂತೆ ಅವರನ್ನು ಏಕಾಂತದಲ್ಲಿ ಬಿಡುವದು ವಿಹಿತವಾಗಲಾರದು. ಈಕೆಯನ್ನು ಮದುವೆಯಾದಾಗಿನಿಂದ ಯಾವ ನಾಟಕಗಳಿಗೂ ಹೋಗಿಲ್ಲ. ನಾಳೆ ಚಿತ್ತರಂಜನ ನಾಟಕಸಭೆಯ ನಾಟಕವಿದೆಯಂತೆ. ಜನರೇನೋ ಬಹಳ ಹೇಳುತ್ತಾರೆ. ನಾನು ಹೋಗುವೆನೆಂಬ ಸುದ್ದಿಯು ತಿಳಿದರೆ ಕಮಲೆಯೂ ಬರಬಹುದು; ಆದರೆ ಆಕೆಯೆದುರಿಗೆ ನಾನೂ ಹೋಗುವದಿಲ್ಲವೆಂದು ಹೇಳಿ ತಪ್ಪಿಸಿ ಹೋಗಬೇಕು. (ಪ್ರಕಾಶಂ) ಯಾಕೆ ಪ್ರಕೃತಿಯು ಹೇಗಿದೆ?

ಕಮಲಾ—ಪ್ರಕೃತಿಯು ಗುಣವಾಗುತ್ತ ನಡೆದದೆ.

ವಿನಾಯಕ—ಡಾಕ್ಟರರು ಬಂದಿದ್ದರೇನು?

ಕಮ—ಇಲ್ಲ, ನಿನ್ನಿನಿಂದ ಬಂದೇ ಇಲ್ಲ.

ವಿನಾಯಕ—(ಸ್ವಗತಂ) ಡಾಕ್ಟರರು ಈಗ ನನಗೆ ಭೆಟ್ಟಿಯಾದಾಗ ಮನೆಗೆ ಹೋಗಿ ಬಂದೆನೆಂದು ಹೇಳಿದರು; ಈಕೆಯು ಇಲ್ಲವೆಂದು ಹೇಳುವ ಕಾರಣವೇನು? [ಪ್ರಕಾಶಂ] ವಸಂತರಾಯರು ಬಂದಿದ್ದಿಲ್ಲವೇ!

ಕಮಲಾ—[ಸ್ವಗತಂ] ಈ ಸಂಗತಿಯನ್ನು ಅಭುಕ್ತ ಮುಚ್ಚಬೇಕೆಂದು ಮಾಡಿದ್ದೆನು. ಇವರಿಗೆ ಡಾಕ್ಟರರು ದಾರಿಯಲ್ಲಿ ಭೆಟ್ಟಿಯಾಗಿದ್ದರೊ ಏನೋ[ಪ್ರ] ವಸಂತರಾಯರಲ್ಲವೇ? ಬಂದಿದ್ದರು. ತಾವು ಬರುವದು ಸ್ವಲ್ಪ ತಡವಾದದ್ದರಿಂದ ಮನಸ್ಸು ಅಧೀರವಾಗಿತ್ತಾದ ಕಾರಣ ತಮ್ಮ ಪ್ರಶ್ನೆಯೇ ಸರಿಯಾಗಿ ತಿಳಿಯಲಿಲ್ಲ.

ವಿನಾಯಕ—[ಸ್ವಗತಂ] ಅಂತೂ ಚಿತ್ತದಲ್ಲಿ ಚಾಂಚಲ್ಯವು ಕ್ರಮವಾಗಿ ಬರಹತ್ತಿದೆ.

ಕಮಲಾ—ಈ ವಾರದ ಕರ್ಮವೀರ ಸಂಚಿಕೆಯನ್ನು ನೋಡಿದಿರೇನು?

ವಿನಾಯಕ—ಯಾಕೆ? ಅದರಲ್ಲೇನಿದೆ?

ಕಮಲಾ—ಈ ಊರಿಗೆ ಯಾವದೋ ಒಂದು ಉತ್ತಮ ನಾಟಕ ಕಂಪನಿಯು ಬಂದಿದೆಯಂತೆ. ಈ ಸಿಕ್‌ಬಿದ್ದಾಗಿನಿಂದ ಮನಸ್ಸಿಗೆ ವಿಶ್ರಾಂತಿಯೇ

ಇಲ್ಲವಾಗಿದೆ. ನಾಳೆ ಹೋಗಿ ಬರೋಣವೇನು?

ವಿನಾಯಕ—ಛೇ ಛೇ, ನಿನ್ನ ಪ್ರಕೃತಿಯು ಇನ್ನೂ ಸರಿಯಾಗಿಲ್ಲ. ನಿದ್ದೆಗೆಟ್ಟರೆ ಮತ್ತಿಷ್ಟು ತೊಂದರೆಯಾಗುವದು.

ಕಮಲಾ—ನಾಳೆ ಹಗಲು ಇದೆಯಂತೆ.

ವಿನಾಯಕ—ಆದರೂ ಆ ಜನಗಟ್ಟಣೆಯಲ್ಲಿಯ ಕೆಟ್ಟ ಹವೆಯು ದುಷ್ಪರಿಣಾಮವುಂಟಾದೀತು?

ಕಮಲಾ—[ಸ್ವಗತಂ]ತರುಣನಾದ ರಸಿಕ ಪತಿಯಿದ್ದರೆ ಪತ್ನಿಯು ಈ ಬೇಡಿಕೆಯನ್ನು ಎಂದಾದರೂ ಅಲ್ಲಗಳೆಯುವನೇ? ಅಷ್ಟೇಕೆ, ತನ್ನ ಪತ್ನಿಯೊಡನೆ ಇಂಥ ಮನೋಹರ ಸಂಗತಿಗಳನ್ನು ನೋಡಬೇಕೆಂದು ತರುಣರಿಗೆ ಬಹು ಪ್ರೀತಿಯ ವಿಷಯ! ಬಹಳ ದೂರವೇಕೆ? ನನ್ನಂಥ ತರುಣಿಯು ನಾಟಕ ನೋಡಲಿಕ್ಕೆ ಉತ್ಸಾಹವನ್ನು ತೋರಿಸಲು ಯಾವ ಸಂಭವವೂ ಇಲ್ಲದೆ ವಸಂತರಾಯರು ನನಗೆ ಟಿಕೀಟು ಕೊಟ್ಟು ಹೋಗಲಿಲ್ಲವೇ? ನಾನು ಹೇಗಿದರೂ ನಾಳೆ ನಾಟಕಕ್ಕೆ ಹೋಗಿಯೇ ಹೋಗುತ್ತೇನೆ. ಆಗ ಇವನನ್ನು ಬರದಂತೆ ಮಾಡಿದರೆ ನನಗೆ ಒಳ್ಳೇ ವಿಲಾಸದಿಂದ ನೋಡಲಿಕ್ಕಾಗುತ್ತದೆ. ಆದ್ದರಿಂದ ಯಾವದೊಂದು ರೀತಿಯಿಂದ ಈತನು ನಾಟಕಕ್ಕೆ ಬಾರದಂತೆ ಮಾಡಬೇಕು. [ಪ್ರ.] ನಾವು ಸ್ವಲ್ಪ ಹೊತ್ತು ಮಾತ್ರ ನೋಡಿ ಬರೋಣ.

ವಿನಾಯಕ—ಛೇ ಛೇ, ಆ ವಿಷವಾಯುವಿನ ಸ್ವಲ್ಪ ಸಂಪರ್ಕವಾದರೂ ಪ್ರಕೃತಿಯು ಕೆಡುವದು. ಅಲ್ಲಿಗೆ ನಾನು ಸಹ ಹೋಗುವದಿಲ್ಲ.

ಕಮಲಾ—ಈ ಪಾಪಿನಿಯ ಸಲುವಾಗಿ ತಮ್ಮಂಥ ರಸಿಕರು ಇಂಥ ಅಮೌಲ್ಯ ವೇಳೆಯನ್ನು ಕಳಕೊಳ್ಳಬೇಡಿರಿ. ನೀವು ಹೋಗಿ ಬನ್ರಿ.

ವಿನಾಯಕ—ಛೇ ಛೇ ಬೇಡ. ನಿನ್ನ ಪ್ರಕೃತಿಯು ಸುಧಾರಿಸಿದ ಮೇಲೆ ಇಬ್ಬರೂ ಕೂಡಿಯೇ ಹೋಗೋಣ.

ಕಮಲಾ—ಡಾಕ್ಟರರಾದರೂ ನನಗೆ ಇನ್ನೂ ಎಂಟು ಹತ್ತು ದಿವಸ ವಿಶ್ರಾಂತಿ ತಕ್ಕೊಳ್ಳಲಿಕ್ಕೆ ಹೇಳಿದ್ದಾರೆ. ಹಾಗಿದ್ದರೆ ತಾವೂ ನಾಟಕ ನೋಡಲಿಕ್ಕೆ ಹೋಗಬಾರದು ನೋಡಿರಿ; ಆದರೆ ತಾವಿಲ್ಲದ ವೇಳೆ ಕಳೆಯುವದು ದುಸ್ತರವಾಗುತ್ತದೆ. ಆದ್ದರಿಂದ ದಯಮಾಡಿ ನಾಳೆ ಮನೆಯಲ್ಲಿರುವಿರೇನು?

ವಿನಾಯಕ—(ಸ್ವಗತಂ) ನಾಳೆ ತಪ್ಪದೆ ನಾಟಕಕ್ಕೆ ಹೋಗಬೇಕಾಗಿದೆ. ಮನೆಯಲ್ಲಿರುವದು ಹೇಗೆ? (ಪ್ರಕಾಶಂ) ಛೇ ಛೇ, ನಾಳೆ ಬ್ಯಾಂಕಿನ

ಜನರಲ್‌ಕಮಿಟಿಯಿದೆ; ಆದ್ದರಿಂದ ಬೇಗನೆ ಮನೆಗೆ ಬರಲಿಕ್ಕೆ ಸಹ ಆಗಲಾರದು.

ಕಮಲಾ—ಹಾಗಾದರೆ ಮಧ್ಯಾಹ್ನದ ಮೇಲೆ ಲೈನಬಝಾರದಲ್ಲಿ ಸುಶೀಲಾಬಾಯಿಯು ಮನೆಗೆ ಹೋಗಿ ಬರುತ್ತೇನೆ.

ವಿನಾಯಕ—ಆಗಲಿ. (ಸ್ವಗತಂ) ಇವಳನ್ನು ತಪ್ಪಿಸಿ ಹೋಗಿ ನಾಟಕ ನೋಡಿ ಬಂದರಾಯಿತು.

ಕಮಲಾ—(ಸ್ವಗತಂ) ಹೇಗೂ ನಾಳೆ ಆಫೀಸಿನಲ್ಲಿ ಬಹಳ ಕೆಲಸವಿದೆಯಂತೆ; ಸುಳ್ಳೇ ಲೈನಬಾಜಾರಕ್ಕೆ ಹೋಗಿರುವೆನೆಂದು ನೆವ ಹೇಳಲಿಕ್ಕೂ ಅವಕಾಶ ಸಿಕ್ಕಿತು. ನಾಟಕವನ್ನು ನೋಡಿಯೇ ಬಂದರಾಯಿತು. (ಪ್ರಕಾಶಂ)ಆದರೆ ಪ್ರಿಯನೇ, ನಾನು ರೋಗಿಯಾದ್ದರಿಂದ, ನನ್ನನ್ನು ಮಾಡಿಕೊಂಡು ಆನಂದದಿಂದ ಕಾಲಕಳೆಯಬೇಕೆಂಬ ತಮ್ಮ ಇಚ್ಛೆಯು ಸ್ವಲ್ಪವೂ ಪೂರ್ಣವಾಗಲಿಲ್ಲ. ಇದಕ್ಕಾಗಿ ಬಹಳ ದುಃಖವಾಗುತ್ತದೆ.

ವಿನಾಯಕ—ಹಾಗೆನ್ನಬೇಡ. ನಮ್ಮಲ್ಲಿ ಪ್ರೇಮವು ಅಷ್ಟು ದೃಢವಾಗಿದ್ದರೆ ಸುಖವು ಇಂದಿಲ್ಲ ನಾಳೆ ಸಿಕ್ಕೇಸಿಗುವದು.

ಕೇಳು—ಪದ—ರಾಗ—ಮಾಂಡ.

ಸದಾ ಸುಖಿಪ ಜೀವಿಗಳಾರಿಲ್ಲವು ‖ ಪ್ರಿಯೇ ‖ ಜಗನೇಮವು ‖ ಪ ‖
ಸೂರನು ನಾರೆ ದಹಿಪ ಕೋಕಿಗಳು । ಮೀರಿದ ಮೋದವ ಪಡುತಿಹವು ।
ಪ್ರಿಯೇ ‖ ನೀರೇಜಾಪ್ತ ಬರೆ ‖ ೧ ‖

ಆ ರಾಘವ ನಲ ಪಾಂಡವಾದಿಗಳು । ಘೋರತಪವ ತಾವ್ ಪೊಂದಿದರು । ಪ್ರಿಯೇ । ಮಹಾಸುಖವಂತರು ‖ ೨ ‖

(ಆಲಂಗಿಸುವನು, ಅಂಕಪಡದೆ ಬೀಳುವದು)

---

೩ನೆಯ ಅಂಕ ಮುಗಿದುದು.



# ೪ನೆಯ ಅಂಕ.

—[:o:]—.

## ಪ್ರ—೧.

ಸ್ಥಳ—ರಸ್ತೆ. ಡಾ. ವಸಂತನು ಕಮಲಾವತಿಯು ಕೈಹಿಡಕೊಂಡು ಬರುವನು.

ವಸಂತ—ಪದ ತುಮುಹಮು ಎಂಬಂತೆ.

ಧರೆಯೊಳ್ ಧನ್ಯನು ಈ ಮೋಹಿನಿಯು | ಕರವ ಪಿಡಿದ ನಾನೇ || ಪ || ಯುವತಿ ಸುಂದರಿಗಾ ಚಂದ್ರನು | ನವನವ ವೇಷವ ಧರಿಸುತ ನಿರುತ | ಭುವನವ ಮೋಹಿಪನು || ೧ ||

ನೀರೇ ಜನಿಗಾ ಸೂರನುದಿಪನು | ನಾರೀಜನ ಪ್ರಾಪ್ತಿಗೆ ಧಾರುಣಿಯೊಳ್ | ಮಿಾರಿಯತಿಪರು || ೨ ||

ಕಮಲಾವತಿ—ಡಾಕ್ಟರ ಇನ್ನೂ ಥಿಯೇಟರ ಎಷ್ಟು ದೂರ ಇರುವದು?

ವಸಂತ—ಅಗೋ ಅಲ್ಲಿ ಕಾಣಿಸುವದೇ ಥಿಯೇಟರು. ನಿಮಗೆ ತೀವ್ರ ನಡೆಯುವ ರೂಢಿಯಿಲ್ಲದ್ದರಿಂದ ಹೀಗೆ ದೂರವಾಗಿ ಕಾಣುತ್ತದೆ. ಬರ್‍ರಿ ಬರ್‍ರಿ ಬೇಗನೆ. (ಎಂದು ಕೈ ಹಿಡಿಯುವನು.)

ಕಮಲಾ—ನಡೆಯಿರಿ ಬರುತ್ತೇನೆ. [ಸ್ವ] ಆಃ! ಎಷ್ಟು ಸುಖಸ್ಪರ್ಶ ವಿದು? ಒಂದು ವೇಳೆ ನನ್ನ ಪತಿಯು ನನ್ನನ್ನು ಹೀಗೆ ಕರೆದುಕೊಂಡು ಹೊರಟಿದ್ದರೆ, ಅಥವಾ ಈತನೇ ನನ್ನ ಪತಿಯಾಗಿದ್ದರೆ........[ಪ್ರಕಾಶಂ] ಡಾಕ್ಟರ ಇದೇನು ಈ ಸರಳ ಹಾದಿಯನ್ನು ಬಿಟ್ಟು ಅಡ್ಡ ಹಾದಿಯನ್ನು ಹಿಡಿದಿರುವಿರಿ?

ವಸಂತ—[ಸ್ವ] ನಾನೊಬ್ಬನೇ ಅಲ್ಲ, ಇಬ್ಬರೂ ಈಗ ಅಡ್ಡಹಾದಿಯಲ್ಲಿ ಬಿದ್ದಿದ್ದೇವೆ. [ಪ್ರಕಾಶಂ] ನಾಟಕವು ಸುರುವಾಗಲಿಕ್ಕೆ ಇನ್ನೂ ಮುಕ್ಕಾಲು ಗಂಟೆ ಅವಕಾಶವಿದೆ. ಈಗ ಬಿಸಲಿನ ತಾಪವು ಬಹಳವಾಗಿದೆ. ಆದ್ದರಿಂದ ಆ ಸರದಾರ ಸೋಡಾ ಫ್ಯಾಕ್ಟರಿಯಲ್ಲಿ ಹೋಗಿ ಸ್ವಲ್ಪ ಕೊಲ್ಡಡ್ರಿಂಕ ತಕ್ಕೊಂಡು ಹೋಗೋಣ. ನಾನು ಹೇಗೂ ಎರಡಾಣೆ ಕೊಟ್ಟು ಸೀಟ ರಿಝರ್ವ ಮಾಡಿಸಿದ್ದೇನೆ.

ಕಮಲಾ—ನನಗೆ ಆ ಕೋಲ್ಡಡ್ರಿಂಕಿನ ರೂಢಿಯಿಲ್ಲ. ಅಲ್ಲದೆ ನಾವು ಹೀಗೆ ತಿರುಗುವದಕ್ಕಿಂತ ಸುಮ್ಮನೆ ಹೋಗಿ ಒಳಗೆ ಕುಳಿತುಕೊಳ್ಳುವದು ನೆಟ್ಟಗೆ.

ವಸಂತ—ಛೀ ಛೀ, ಅಷ್ಟೇನು ಹೆದರಿಕೆ? ನಡೆಯಿರಿ ಹಾಗಾದರೆ ಬೇಗ ಬೇಗನೆ ಸರದಾರಗೃಹಕ್ಕೆ ಹೋಗಿ ಥೇಟರ ಕಡೆಗೆ ಸಾಗೋಣ. [ಇಬ್ಬರೂ ಹೋಗುವರು ] [ಬಳಿಕ ವಿಶ್ವಪರಾಯರು ಬರುವರು.]

ಇತ್ತೀಚೆಗೆ ಎಲ್ಲಿ ಕೇಳಿದರೂ ಕಿವಿಗೆ ಬೀಳುವದೆಂದರೆ ಬಡತನ, ಬಡತನ! ಯಾರಿಗೆ ನೋಡಿದರೂ ಕೈಯಲ್ಲಿ ದುಡ್ಡಿಲ್ಲ. ಆದರೆ ಖರ್ಚುಮಾತ್ರ ಕಡಿಮೆಯಿಲ್ಲ. ನಾಟಕದ ಥೇಟರುಗಳು ಯಾವಾಗಲೂ ತುಂಬಿರುತ್ತವೆ; ವರ್ಷವರ್ಷಕ್ಕೆ ಜಾತ್ರೆಗೆ ಹೆಚ್ಚು ಜನರು ಕೂಡುತ್ತಾರೆ; ದೇಶವನ್ನು ಹಾಳುಮಾಡಿ ಪತ್ರೀ ಬಿತ್ತುವ ಸೆರೆದ ಅಂಗಡಿಗಳ ಗುತ್ತಿಗೆ ಬರುತ್ತ ನಡೆದದೆ; ಮದುವೆ ಮುಂಜಿಗಳಲ್ಲಿ ದುಂದುಗಾರಿಕೆಯು ಮಿತಿಮೀರುತ್ತಲಿದೆ; ಪರದೇಶೀಯ ಅರಿವೆಗಳ ಅಂಗಡಿಗಳು ಬೆಳಗಾದರೊಂದು ಹೊರಗೆ ಬರಹತ್ತಿವೆ; ಕೋರ್ಟು ಕಚೇರಿಗೆ ಬರಹೋಗುವ ಜನರ ಸಂಖ್ಯೆಯು ಇಮ್ಮಡಿ ಮುಮ್ಮಡಿಯಾಗಿದೆ; ಬಂಗಾರ ಬೆಳ್ಳಿಯು ೯೨ ಕೋಟಿ ರೂ. ಗಳವರೆಗೆ ಹಿಂದುಸ್ಥಾನಕ್ಕೆ ಬರುತ್ತಲಿದೆ. ಹೀಗಿದ್ದಮೇಲೆ ಭರತ ಖಂಡದಲ್ಲಿ ಬಡತನವೆಂದರೇನು? ಆದರೆ ಈ ಏರಿಕೆಯ ಸಂಗಡ ಬಡವರ ಸಂಖ್ಯೆಯೂ ಹೆಚ್ಚುತ್ತ ನಡೆದಿದೆಯೆಂಬುದನ್ನು ನೆನಪಿನಲ್ಲಿಡಬೇಕಾಗುವದು. ಇದರಿಂದ ಬಡವರ ಧನವನ್ನಪಹರಿಸಿ ವಿಲಾಸವನ್ನುಹೊಡೆಯುವ ಗಂಟುಗಳ್ಳರ ಸಂಖ್ಯೆಯು ಹೆಚ್ಚಾಗುತ್ತಿದೆಯೆಂದು ಊಹಿಸಬೇಕಾಗುತ್ತದೆ. ಎಲ್ಲಿ ನೋಡಿದಲ್ಲಿ ಸುಧಾರಣೆ, ಎಲ್ಲಿ ಕಂಡಲ್ಲಿ ಫ್ಯಾಶನ್ನು, ಎಲ್ಲಿ ಹೋದಲ್ಲಿ ಆಡಂಬರ! ಆಚಾರ ಉಚ್ಚಾರ ವಿಚಾರಗಳಲ್ಲಿ ಐಕ್ಯವೆಂಬುದು ಕಂಡುಬರುವದೇ ಇಲ್ಲ. ಸಾಲದುದಕ್ಕೆ ಈ ಜಾತಿಭೇದದ ಗೊಂದಲ. ಬ್ರಾಹ್ಮಣನಾದರೇನು? ಬ್ರಾಹ್ಮಣೇತರನಾದರೇನು? ಹಿಂದುವೇನು? ಮುಸಲ್ಮಾನನೇನು? ಎಲ್ಲರ ಗುರಿಯೂ ಭರತಖಂಡದಉದ್ಧಾರವೆಂಬದು ಒಂದೇ ಇರುವಾಗ ತಮ್ಮ ತಮ್ಮಷ್ಟಕ್ಕೆ ಬಡಿದಾಡಿ ಆತ್ಮೀಯ ಅವನತಿಯನ್ನು ಮಾಡಿಕೊಳ್ಳುವದೇಕೆ? ಈಗ ನೀತಿಮತ್ತೆಯ ಅಭಾವವೇ ಇಂಥ ಅನೈಕ್ಯಕ್ಕೆ ಮೂಲವಾಗಿದೆ. ಅದನ್ನು ಬೆಳಿಸಬೇಕಾದರೆ ಇರುವ ಅನೇಕ ಮಾರ್ಗಗಳಲ್ಲಿ ನಾಟಕವು ಪ್ರಥಮಸ್ಥಾನವನ್ನು ಹೊಂದುತ್ತಿದೆ. ಆದರೆ ನಾಟಕಕಂಪನಿಗಳು ಕೇವಲ ಉದರಂಭರಣದ ಧ್ಯೇಯವನ್ನಿಟ್ಟುಕೊಂಡಿರುವದರಿಂದ ನೀತಿಯ ಬೆಳವಣಿಗೆಗೆ ಅವಕಾಶವಾಗುವದಿಲ್ಲ. ಶೃಂಗಾರಪರವಾದ ನಾಟಕಗಳನ್ನು ಮಾಡಿ ತೋರಿಸಿ, ಇನ್ನೂ ನೀತಿಯನ್ನು ಕೆಡಿಸುತ್ತಿರುವರು. ಆದರೆ ಈ ಚಿತ್ತರಂಜನ ನಾಟಕ ಮಂಡಳಿಯವರು ಕೇವಲ ಸಮಾಜಸೇವೆಯನ್ನೇಮುಂದಿಟ್ಟುಕೊಂಡಿರುವರಲ್ಲದೆ,

ಸಾಮಾಜಿಕ ನಾಟಕಗಳನ್ನು ಮಾಡಿ ಬಂದ ಉತ್ಪನ್ನವನ್ನು ಸಹ ಸಮಾಜದ ಸಲುವಾಗಿ ವ್ಯಯಮಾಡಲು ಕೃತನಿಶ್ಚಯರಾಗಿದ್ದಾರೆ. ಸಂಕಲ್ಪದಮೇಲೆ ಫಲಕೊಡುವವನು ಭಗವಂತನಾಗಿದ್ದರೂ, ಅವರ ಸದುದ್ದೇಶವನ್ನು ಸ್ಮರಿಸಿ ನಾವೆಲ್ಲರೂ ಸಹಾಯಮಾಡಿದರೆ, ಒಂದು ರೀತಿಯಿಂದ ಸ್ವ-ಪರ ಹಸ್ತಗಳಿಂದ ದೇಶಸೇವೆಯನ್ನು ಮಾಡಿದಂತಾಗುತ್ತದೆ. ವೇಳೆಯಾಗುತ್ತ ಬಂತು ಹೋಗೋಣ. (ಎಂದು ಹೋಗುವನು.)

---

## ಪ್ರವೇಶ—೨

ಸ್ಥಳ—ನಾಟಕಗೃಹ. ಒಂದು ಕಡೆಗೆ ಕಮಲಾವತಿ ಡಾಕ್ಟರ ಇನ್ನೂ ಕೆಲವು ಜನರು ಕುಳಿತಿರುವರು. ವಿಶ್ವಾಸರಾಯನು ಮತ್ತೊಂದು ಕಡೆಗೆ ಕುಳಿತಿರುವನು. ಆತನ ಬದಿಯಲ್ಲಿ ಒಂದು ಖುರ್ಚಿಖಾಲಿ ಇರುವದು.

ರತಿಮದನರ ಪ್ರವೇಶ.

ಮದನ, ಪದ—ನರನಾರಿಯ ತನುಮನ ಧನಗಳ ಸೆಳೆಯುತ ತೋರಿಪೆ ನೆನ್ನಯ ಶಕ್ತಿಯನು ‖ ಪಲ್ಲ ‖ ಯತೀಂದ್ರನಾಗಿಹ ಶೂಲಿಯ | ವ್ರತವನು ಭಂಗಿಸಿ ಗಿರಿಜೆಯ ಮೋಹಿಸಿ ಕಾರ್ಯವ ಸಾಧಿಸಿದೆ ‖ ೧ ‖

ಪ್ರಿಯೇ, ನನ್ನ ಪ್ರಭಾವದಿಂದ ಬೇಕಾದ ಸ್ತ್ರೀಗೆ ಬೇರೆ ಪುರುಷನ ಮೇಲೆ ಸಹ ಮನಸ್ಸು ಮಾಡಲಿಕ್ಕೆ ಹಚ್ಚಬಲ್ಲೆನು.

ರತಿ—ಹಾಗೆಂದಿಗೂ ಆಗಲಾರದು. ಮದನನು ತಾನೆಷ್ಟು ಶೂರನಿದ್ದರೂ ರತಿಯ ದಾಸನೇ ಸರಿ. ಯಾವ ಪುರುಷನಿಗೆ ಸ್ತ್ರೀಯು ತನ್ನ ಹೃದಯ ಸರ್ವಸ್ವವನ್ನೊಪ್ಪಿಸಿರುವಳೋ ಅವನ ಮೇಲೆಯೇ ಪ್ರೇಮಮಾಡುವಳಲ್ಲದೆ, ಪರಪುರುಷನು ಎಷ್ಟು ಶ್ರೀಮಂತನಿದ್ದರೂ ಮತ್ತು ಮದನನು ಬೇಕಾದಷ್ಟು ಬಾಣಪ್ರಹಾರಮಾಡಿದರೂ ಆ ಪರಪುರುಷನ ಕಡೆಗೆ ಕಣ್ಣೆತ್ತಿ ಸಹ ನೋಡಲಿಕ್ಕಿಲ್ಲ.

ಮದನ—ಹಾಗಾದರೆ ನೋಡೋಣ.

ರತಿ—ನೋಡುವದಕ್ಕೆ ಬಹಳ ದೂರಹೋಗುವ ಅವಶ್ಯವಿಲ್ಲ. ಉಜ್ಜಯಿನಿಯ ವೇಶ್ಯಾವಾಟದಲ್ಲಿರುವ ಈ ವಸಂತಸೇನೆಯೆಂಬ ವೇಶ್ಯೆಯು ಚಾರುದತ್ತನೆಂಬ ವಣಿಜನನ್ನು ಮನಸಾ ಪ್ರೀತಿಸುತ್ತಿರುವಳು. ಆಗಲಿ, ಇವಳ ಮೇಲೆ ಬಾಣಪ್ರಹಾರವು. ನೋಡೋಣ!

ಮದನ—ಇಗೋ ನೋಡು, ಮಾಡುತ್ತೇನೆ. (ಎಂದು ಹೋಗುವನು.)

* * * * *

ರಾ. ಬ. ವಿನಾಯಕ—ಎಷ್ಟು ತಡವಾಯಿತು? ಈಗಾಗಲೇ ಪ್ರಸ್ತಾವನೆಯು ಮುಗಿದಂತೆ ಕಾಣುತ್ತದೆ. (ಎಂದು ಖುರ್ಚಿಯಮೇಲೆ ಕೂಡ್ರುವನು.)

ವಿಶ್ವಾಸ:—ಏನು ರಾವಬಹಾದ್ದೂರರು ಬರುವದು ತಡವಾಯಿತು. ಪಾಪ! ಮುದುಕರ ಕೆಲಸ! ತರುಣರಿಗಾದರೆ ಇಂಥ ರಸಿಕ ವಿಷಯಗಳ ಮೇಲೆ ಪ್ರೀತಿ ಬಹಳ.

ವಿನಾಯಕ:—ಸ್ವಲ್ಪ ಕೆಲಸವಿತ್ತು ಆಫೀಸಿನಲ್ಲಿ! (ಸ್ವ) ಗಂಟುಬಿದ್ದರಲ್ಲ ಬಿಳೇ ಟೊಪ್ಪಿಗಿಯವರು ಮತ್ತೆ ನಮ್ಮ ಸುತ್ತು!

\+ \+ \+ \+ \+

ಚಾರುದತ್ತನು—ಪ್ರವೇಶಿಸಿ (ಬಡತನ ವರ್ಣನೆ) ಪದ—

ಹಣವೇ ನಿನ್ನಯ ಗುಣವೆಷ್ಟೆಂದು ಬಣ್ಣಿಪೆ || ಎಂಬ ಪದವನ್ನು ಹಾಡುವನು.

ವಿದೂಷಕ—ಮಿತ್ರಾ, ಇದೇನು ಚಿಂತಿಸುತ್ತಿರುವೆ?

ಚಾರುದತ್ತ—ಮೈತ್ರೇಯಾ, ಘನಾಂಧಕಾರದಲ್ಲಿರುವವನಿಗೆ ದೀಪವು ದೊರಕಿದಂತೆ, ಜನ್ಮದರಿದ್ರನಿಗೆ ಶ್ರೀಮಂತಿಕೆಯು ಬಂದರೆ ಬಹಳ ಹಿತವಾಗುವದು. ಆದರೆ ಗರ್ಭಶ್ರೀಮಂತನಿಗೆ ದಾರಿದ್ರ್ಯವು ಬಂದರೆ ಮಾತ್ರ ಅವನು ಜೀವನ್ಮೃತನೇ ಸರಿ.

ವಿದೂಷಕ—ಚಾರುದತ್ತ, ಮರಣ ಮತ್ತು ಬಡತನಗಳಲ್ಲಿ ಶ್ರೇಷ್ಠವಾದದ್ದು ಯಾವದು?

ಚಾರು—ನನಗೆ ಮರಣವೇ ಪ್ರಿಯಕರವಾಗಿದೆ. ಯಾಕೆಂದರೆ ಮರಣವು ಅಲ್ಪಕಾಲ ಕ್ಲೇಶವನ್ನುಂಟು ಮಾಡುವದು; ಆದರೆ ದಾರಿದ್ರ್ಯವು ಜೀವವಿರುವವರೆಗೂ ದುಃಖವನ್ನುಂಟು ಮಾಡುವದು. ಗೆಳೆಯಾ ನನ್ನ ಐಶ್ವರ್ಯವು ಹೋಯಿತೆಂದು ನಾನು ದುಃಖಿಸುವದಿಲ್ಲ. ಆದರೆ ಅತಿಥಿಗಳು ಪೂರ್ವ ವಿಭವವನ್ನು ನೆನೆಸಿ ನನ್ನ ಮನೆಯ ಬಾಗಿಲಿಗೆ ಬಂದು ನಿರಾಶರಾಗಿ ಹೋಗುವದನ್ನು ನೋಡಿ ನನಗೆ ಬಹಳ ವ್ಯಸನವಾಗುತ್ತದೆ. ಮಿತ್ರಾ, ಭಾಗ್ಯಕ್ರಮದಿಂದ ಧನವು ಬರುವದೂ ಉಂಟು-ಹೋಗುವದೂ ಉಂಟು; ಆದರೆ ಮನುಷ್ಯನು ದರಿದ್ರನಾದ ಕೂಡಲೆ ಅವನ ಜೀವನ್ಮಿತ್ರರು ಸಹ ತೊಲಗಿ ಹೋಗುತ್ತಿರುವರೆಂಬ ಸಂಗ

ತಿಯು ನನ್ನನ್ನು ಒಂದೇ ಸವನೆ ಸುಡುತ್ತಿದೆ. ಬಡತನವು ಚಿಂತಾನಿವಾಸವು, ಅಪಜಯದ ಆವಾಸವು, ಮಿತ್ರ ಅವಹೇಲನದ ಆಗರವು, ಸ್ವಜನದ್ವೇಷದ ಸದ್ಮವು. ಬಹಳವೇನು? ಸರ್ವಾಪದಗಳಿಗೂ ಈ ಬಡತನವೇ ಮೂಲವಾಗಿದೆ. ಮಿತ್ರನೇ ಈ ವೇಳೆಯಲ್ಲಿ ರಾಜಚಾರಿಗಳು ತಿರುಗಾಡುವದು ಬಹಳ. ಬಡವರಾದ ನಮ್ಮ ಮೇಲೆ ಇಲ್ಲದ್ದೊಂದು ಆರೋಪವು ಬರಬಹುದು. ನಡೆ ಹೋಗೋಣ. (ಹೋಗುವರು) (ಶಕಾರ ವಿಟರು ಬರುವರು)

ಶಕಾರ—ಭಾವಾ ಭಾವಾ, ರಥವು ಬಂದಂತೆ ತೋರುತ್ತದೆ.

ವಿಟ—ಅದು ಹೇಗೆ?

ಶಕಾರ—ಮುದಿಸಾಯಿಯಂತೆ ಗುರುಗುಡುವ ರಥದ ಧ್ವನಿಯು ಕೇಳ ಬರುವದಿಲ್ಲವೇ! (ಚೇಟನು ಬರುವನು) ಬಾ ಪುತ್ರಕ ಚೇಟಾ, ಬಂದೆಯಾ?

ಚೇಟ—ಅಹುದು.

ಶಕಾರ—ರಥವನ್ನೂ ತಂದೆಯಾ? ಚೇಟ—ಅಹುದು.

ಶಕಾರ—ಎತ್ತುಗಳೂ ಬಂದವೇ? ಚೇಟ—ಅಹುದು.

ಶಕಾರ—ನೀನೂ ಬಂದಿರುವೆಯಾ? ಚೇಟ—ಅಹುದು.

ಶಕಾರ—ಎಲ್ಲಿ ರಥವೆಲ್ಲಿದೆ? (ಎಂದು ಹೋಗಿ ನೋಡಿ) ಅಯ್ಯೋ ಅಯ್ಯೋ ಭಾವಾ, ರಾಕ್ಷಸಿಯು ನನ್ನನ್ನು ಕಳವು ಮಾಡಲಿಕ್ಕೆ ಬಂದಿರುವಳು; ಕಳ್ಳಿಯು ನನ್ನನ್ನು ತಿನ್ನಲಿಕ್ಕೆ ಬಂದಿರುವಳು.

ವಸಂತಸೇನಾ—(ಪ್ರವೇಶಿಸಿ ಸ್ವಗತಂ)ಅಯ್ಯೋ! ಏನಿದು? ನನ್ನ ಕಣ್ಣಿಗೆ ಆಯಾಸವನ್ನುಂಟು ಮಾಡುವ ರಾಜಶ್ಯಾಲಕನಿಲ್ಲೇಕೆ ಬಂದಿರುವನು? ಏನೋ ಮೋಸವಾದಂತೆ ತೋರುತ್ತದೆ.

ವಿಟ—(ವಸಂತಸೇನೆಗೆ) ಭದ್ರೇ, ವಸಂತಸೇನೆ ಇಲ್ಲಿಗೇಕೆ ಬಂದೆ?

ವಸಂತಸೇನಾ—ವಾಹನ ವಿಪರ್ಯಾಸದಿಂದ ಇಲ್ಲಿಗೆ ಬಂದೆನು. ಶರಣಾಗತಳನ್ನು ರಕ್ಷಿಸಬೇಕು.

ವಿಟ—ಬೆದರಬೇಡ. ವೇಶ್ಯೆಯಾದ ನೀನು ಶಕಾರನನ್ನು ವರಿಸುವದಿಲ್ಲವೇ? ವಸಂತಸೇನೇ, ಬಾವಿಯಲ್ಲಿ ದ್ವಿಜವರನೂ ಮೂರ್ಖನೂ ಸ್ನಾನ ಮಾಡುತ್ತಾರೆ, ಪುಷ್ಪಸಮೃದ್ಧವಾದ ಬಳ್ಳಿಯನ್ನು ನವಿಲು ಬಗ್ಗಿಸಿದಂತೆ ಕಾಗೆಯೂ ಬಗ್ಗಿಸುತ್ತದೆ. ನಾವುಗಳಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯರಾರಾದರೂ ಕುಳಿತು ದಾಟಬಹುದು. ಆದರಂತೆ ವೇಶ್ಯೆಯನ್ನು ಇಚ್ಛಿಸಲಿಕ್ಕೆ ಸರ್ವರಿಗೂ ಅಧಿಕಾರವುಂಟು.

ವಸಂತಸೇನೆ—ಅದೆಲ್ಲ ನಿಜ. ಆದರೆ ಅನುರಾಗಕ್ಕೆ ಮೂಲವಾದವು ಗುಣಗಳಲ್ಲವೇ? ಬಲತ್ಕಾರ ಹೇಗೆ ನಡೆಯುವದು?.

ವಿಟ—(ಸ್ವಗತಂ) ಇವಳ ಮನಸ್ಸನ್ನು ತಿರುಗಿಸುವದ್ದು ಅತಿ ಕಷ್ಟಕರ ವಾಗಿದೆ. [ಶಕಾರನಿಗೆ]ಶ್ಯಾಲಕ, ಈ ವಸಂತಸೇನೆಯು ನಿನ್ನಲ್ಲಿ ಅಭಿಸಾರಿಕೆಯಾಗಿ ಬಂದಿರುವಳು.

ವಸಂತಸೇನೆ—ಶಾಂತಂ ಪಾಪಂ-ಶಾಂತಂ ಪಾಪಂ!!

ಶಕಾರ—ಹಾಗಾದರೆ-ಅಂಬಿಕೇ, ತಾಯೇ, ಇಗೋ ನಿನ್ನ ಕಾಲು ಬೀಳುತ್ತೇನೆ. ನನ್ನನ್ನು ಅಂಗೀಕರಿಸು.

ವಸಂತ—ಮೂರ್ಖಾ ಸರಿ ಹಿಂದಕ್ಕೆ. ಗಾಡಿಯು ಬದಲಾಗಿ ಇಲ್ಲಿಗೆ ಬಂದೆನಲ್ಲದೆ ನಿನ್ನನ್ನು ಅಭಿಸರಣಮಾಡಿಲ್ಲ.

ಶಕಾರ—ಹಾಗಿದ್ದರೆ ಎಲೇ ಗರ್ಭದರಿದ್ರ ಚಾರುದತ್ತನನ್ನು ಅನುಸರಿಸುವವಳೇ ಇಲ್ಲಿಂದ ನಡೆ. (ವಸಂತಸೇನೆಯು ಹೋಗಹತ್ತುವಳು.) ವಸಂತಸೇನೇ ನಿಲ್ಲು ನಿಲ್ಲು. ನಿನಗೆ ಬೇಕಾದ ಧನಕನಕಾದಿಗಳನ್ನು ಕೊಡುವೆನು; ನೀನು ಹೇಳಿದಂತೆ ಕೇಳುವೆನು. ನಿನ್ನ ಕಾಲಿಗೆ ಬೀಳುತ್ತೇನೆ; ನನ್ನನ್ನು ವರಿಸುವದಿಲ್ಲವೇಕೆ?

ವಸಂತ—ಸ್ತ್ರೀಯು ಯಾವಾಗಲೂ ರೂಪ ಗುಣ ವಯಗಳಿಂದ ಸದೃಶನಾದ ಪುರುಷನನ್ನು ವರಿಸಬೇಕಲ್ಲದೆ ದುಡ್ಡಿಗೆ ಮರುಳಾಗಿ ಅಯೋಗ್ಯನ ಕೈಹಿಡಿಯದಾರದು. ಸಹಕಾರ ಪಾದಪವನ್ನು ಬಿಟ್ಟು ಪಲಾಶವನ್ನು ಆಶ್ರಯಿಸುವದೆಂತು?

ಶಕಾರ—ಎಲೇ ನನ್ನನ್ನು ಪಲಾಶವೃಕ್ಷವನ್ನಾಗಿ ಮಾಡಿದೆಯಾ? ನನ್ನನ್ನು ಬೈಯುತ್ತಲೇ ಆ ಚಾರುದತ್ತನನ್ನು ಸ್ಮರಿಸುವೆಯಲ್ಲವೇ? ಇರಲಿ, ಈಗಲಾದರೂ ನನ್ನ ಮೇಲೆ ಪ್ರೇಮಮಾಡುವಿಯೋ ಇಲ್ಲವೋ?

ವಸಂತಸೇನೆ—ಇಲ್ಲ ಎಂದೂ ಇಲ್ಲ.

ಶಕಾರ—ಹಾಗಿದ್ದರೆ ನೀನು ಪ್ರೇಮಮಾಡುವದು ಯಾರ ಮೇಲೆ?

ವಸಂತಸೇನೆ—ಚಾರುದತ್ತನ ಮೇಲೆ.

ಶಕಾರ—ನಾನು ರಾಜಶ್ಯಾಲಕನಿದ್ದೇನೆ.

ವಸಂತಸೇನೆ—ಆದರೂ ಚಾರುದತ್ತನ ಮೇಲೆ.

ಶಕಾರ—ನಾನು ಶ್ರೀಮಂತನಿದ್ದೇನೆ.

ವಸಂತಸೇನೆ—ಆದರೂ ಚಾರುದತ್ತನ ಮೇಲೆ.

ಶಕಾರ—ಅವನು ನನಗಿಂತಲೂ ಕಡಿಮೆ ತರಗತಿಯವನು.

ವಸಂತಸೇನೆ—ಆದರೂ ಚಾರುದತ್ತನ ಮೇಲೆ.

ಶಕಾರ—ಅವನು ಜನ್ಮದರಿದ್ರನು.

ವಸಂತಸೇನೆ—ಆದರೂ ಚಾರುದತ್ತನ ಮೇಲೆ.

ಶಕಾರ—ಹಾಗಾದರೆ ಎಲೇ, ಆ ದರಿದ್ರನು ನಿನ್ನನ್ನು ಕಾಯಲಿ. ಈಗಲೇ ನಿನ್ನನ್ನು ಕೊಲ್ಲುತ್ತೇನೆ.

ವಸಂತಸೇನೆ—ಆತನ ಮೇಲೆ ನನ್ನ ನಿಶ್ಚಲಪ್ರೇಮವಿದ್ದರೆ ಆತನೇ ನನ್ನನ್ನು ಕಾಯುವನು. ಚಾರುದತ್ತನಿಗೆ ನಮಸ್ಕಾರವು.

ಶಕಾರ—ಎಲೇ, ಇನ್ನೂ ಅವನನ್ನೇ ನೆನೆಸುತ್ತಿರುವೆಯಾ? ರಕ್ಷಿಸಲಿ ಹಾಗಾದರೆ. (ಎಂದು ಕುತ್ತಿಗೆಯನ್ನು ಹಿಚುಕುವನು. ಪರದೆ ಬೀಳುವದು.)

(ಡಾಕ್ಟರನು ಒಂದೇಸವನೆ ಕಮಲೆಯನ್ನು ನೋಡುತ್ತಿರುವನು. ವಿನಾಯಕರಾಯನು ಅವರಿಬ್ಬರನ್ನು ನೋಡಿ ಕೋಪದ ಆವಿರ್ಭಾವವನ್ನು ತೋರಿಸುತ್ತಿರುವನು.)

———

## ಪ್ರವೇಶ—೩

ರಸ್ತೆ—ಡಾಕ್ಟರ ಮತ್ತು ಕಮಲಾವತಿಯರು ಸಿಂಗಾರಾಗಿ ಬರುವರು.

ಕಮಲಾ—ಡಾಕ್ಟರ, ಇಂದೇ ರಾತ್ರಿ ಮೂರು ಗಂಟೆಗೆ ನೀವು ದವಾಖಾನೆಗೆ ತಪ್ಪದೆ ಬರಬೇಕು.

ವಸಂತ—ಅವಶ್ಯ. ಬರುವದು ಸ್ವಲ್ಪ ತಡವಾದರೆ ನೀನು ಹೊರಗೆ ನಿಲ್ಲಬೇಕಾದೀತು. ಆದ್ದರಿಂದ ತೆಗೆದುಕೋ ಈ ಕೀಲೀಕೈಸರವನ್ನು. ನನ್ನಲ್ಲಿ ಮತ್ತೊಂದಿದೆ. ಮೊದಲು ಒಂದವರು ಒಳಗೆ ಹೋಗಿ ಸ್ವಲ್ಪ ದಾರೀ ನೋಡಬೇಕು. (ಎಂದು ಸರವನ್ನು ಕೊಡುವನು.)

ವಸಂತ—ಆಃ ಪದ—ಬಾಂಕಿಚಿತವನಕೆ ಎಂಬ ಗಜಲು.

ಧನ್ಯ ಪತಿಯಾದೆ ಸಾರಸಾಕ್ಷಿಗೀಗಲೀಗ ನಾ | ಮನಹಾರೀ ವಿಮೋಹಾಕರೀ ||ಪಲ್ಲ|| ಶೃಂಗಾರ ತೋರಿ | ಪ್ರಮೋದವ ಬೀರಿ | ನಾನೀಗ ಕೃತಕಾರ್ಯನಾದೆ ||೧||

ಇನ್ನು ಕಮಲಾವತಿಯು ನನ್ನ ಕೈಬಿಟ್ಟು ಹೋಗುವದೆಲ್ಲಿಗೆ? ಹೋಗುವಳಾದರೂ ಹೇಗೆ? ಹೆಂಗಸರು ಎಲ್ಲಿಯ ವರೆಗೆ ವಶವಾಗುವದಿಲ್ಲವೋ ಅಲ್ಲಿಯವರೆಗೇ ಅವರು ದುರ್ಲಭರು. ಒಂದುಸಾರೆ ವಶರಾದರೆ, ಒಂದುಸಾರೆ ಚಾರಿತ್ರ್ಯ

ಭ್ರಷ್ಟರಾದರೆ, ಒಮ್ಮೆ ಅಡ್ಡದಾರಿಯಲ್ಲಿ ಕಾಲಿಟ್ಟರೆ ಸಾಕು; ಎಂದೆಂದಿಗೂ ಅವರು ನಮ್ಮವರೇ. ಆ ಮೇಲೆ ಅವರನ್ನು ಜರಿಯಲಿ, ಹೊಡೆಯಲಿ, ಬಡಿಯಲಿ, ಹೊರಗೆ ದೂಡಲಿ, ಅವರ ಸರ್ವಸ್ವವನ್ನೂ ಹಾಳುಮಾಡಲಿ, ಹೀಗೆ ಏನು ಮಾಡಿದರೂ ನಮ್ಮನ್ನು ಬಿಟ್ಟು ಹೋಗುವದಿಲ್ಲ. ಆಃ! ಎಂಥ ಸೌಂದರ್ಯಶಾಲಿಯು! ನಾನೇನೋ ನಾಟಕ ನೋಡಲಿಕ್ಕೆ ಬಂದೆನು; ಆದರೆ ಅದರೊಡನೆ ಕಮಲಾವತಿಯ ಮುಖವನ್ನು ಎವೆಯಿಕ್ಕದೆ ನೋಡುವದಕ್ಕೆ ಸಿಕ್ಕದ್ದೊಂದು ಹೊಸ ಲಾಭವು. ಪ್ರಸಂಗ ಸಿಕ್ಕಿದಾಗಲೇ ಪರಸ್ತ್ರೀಯರನ್ನು ಕಣ್ತುಂಬ ನೋಡಿಬಿಡಬೇಕು. ಯಾಕಂದರೆ ಪುನಃ ಪುನಃ ಅವರು ನಮ್ಮ ಹತ್ತಿರ ಬರುತ್ತಿರುವದಿಲ್ಲ. ಓಹೋ! ವೇಳೆಯಾಗುತ್ತ ಬಂತು, ಬೇಗ ಹೋಗಿ ಒಳ್ಳೇ ಮೋಹಕ ವೇಷಹಾಕಿಕೊಂಡು ಬರುವೆನು. ಇನ್ನು ಕಮಲಾವತಿಯು ನನ್ನ ಕೈಬಿಟ್ಟು ಹೇಗೆ ಹೋಗುತ್ತಾಳೋ ನೋಡುತ್ತೇನೆ. (ಎಂದು ಪದವನ್ನು ಹಾಡುತ್ತ ಹೋಗುತ್ತಾನೆ.)

ವಿಶ್ವಾಸರಾವ:-ಇಂದಿನ ಮೃಚ್ಛಕಟಿಕನಾಟಕದಲ್ಲಿ ಶರ್ವಿಲಕನಷ್ಟು ಮಹತ್ವದ ಪಾತ್ರವು ಮತ್ತೊಂದಿಲ್ಲ. ಅವನು ಕಳ್ಳನಲ್ಲ, ಕ್ರಾಂತಿಕಾರಕನು; ಪಾಲಕರಾಜನ ದಬ್ಬಾಳಿಕೆಯನ್ನು ಮುರಿದು ಪ್ರಜೆಗಳಿಗೆ ಕ್ಷೇಮವನ್ನುಂಟುಮಾಡಲು ಪ್ರಯತ್ನಿಸಿದವನು. ಗುಪ್ತರೀತಿಯಿಂದ ರಾಜಕೀಯ ದರೋಡೆಮಾಡಿ ಕ್ರಾಂತಿಕಾರಕ ಪಕ್ಷಕ್ಕೆ ಧನಸಹಾಯವನ್ನು ಮಾಡುತ್ತಿದ್ದವನು. ಆದರೂ ನೀತಿಯ ನೆಲೆಯನ್ನು ಮೀರಿಲ್ಲ ತನ್ನ ಸ್ವಂತ ಹಿತಸಂಬಂಧವಿಲ್ಲದೆ ಕೇವಲ ರಾಜಕರಣವನ್ನು ಸಾಗಿಸುವ ಉದ್ದೇಶದಿಂದ ಮಾಡಿದ ಖೂನು, ದರೋಡೆ, ಗೋಳೀಬಾರು ಮೊದಲಾದ ಅಧಮಾಧಮ ಕೃತಿಗಳೆಲ್ಲವೂ ಕ್ಷಮ್ಯಗಳೇ. ಯಾಕಂದರೆ ರಾಜಕರಣವನ್ನು ಎಂದೂ ನಿಲ್ಲಿಸಲಿಕ್ಕೆ ಬರುವುದಿಲ್ಲ. ಅದಕ್ಕೆ ಬೇಕಾಗುವ ದ್ರವ್ಯವು ಸರಳಮಾರ್ಗದಿಂದ ಸಿಕ್ಕದಿದ್ದರೆ, ಪ್ರಜೆಗಳ ಜೀವಿತ-ಸ್ವಾಸ್ಥ್ಯವನ್ನು ಹಾಳುಮಾಡಿಯಾದರೂ ಧನಸಂಪಾದನೆ ಮಾಡಲಿಕ್ಕೆ ಬೇಕು. ಇದೇ ತತ್ವದಿಂದಲೇ ವಾರನ್ ಹೇಸ್ಟಿಂಗ್ಸ್, ಲಾರ್ಡ ಕ್ಲೈವ, ಜ. ಡಾಯರ ಮೊದಲಾದವರಿಗೆ 'ನಿರಪರಾಧಿ'ಯೆಂದು ಸರ್ಟಿಫಿಕೀಟು ಸಿಕ್ಕಿತು; ಆದರೆ ಶರ್ವಿಲಕನು ಎಂದೂ ನರಾಧಮ ಕೆಲಸ ಮಾಡಿಲ್ಲ. ರಾಜಕರಣವು ಸಹ ನೀತಿಯ ತಳಹದಿಯ ಮೇಲೆಯೇ ನಿಲ್ಲತಕ್ಕುದು. ಸೈತಾನೀ ಸಾಮ್ರಾಜ್ಯವು ಸುರುವಾದಾಗ ಇಂಥ ದರೋಡೆಖೋರರು ಬೇಕೇಬೇಕು. ಯಾಕಂದರೆ ರಾಜನು ಪ್ರಜಾದ್ರೋಹ ಮಾಡಿದಾಗ ಪ್ರಜೆಗಳು ರಾಜದ್ರೋಹ ಮಾಡುವದು ಜನ್ಮಸಿದ್ಧ ಹಕ್ಕು. (ಹೋಗುವನು)

ವಿನಾಯಕರಾವ:—(ಉನ್ಮತ್ತನಂತೆ ಪ್ರವೇಶಿಸಿ) ಕಮಲಾವತಿ, ವಸಂತ! ಛೀ-ಛೀ! ವಿನಾಯಕರಾವ ಮುಪ್ಪಿನಿಂದ ನಿಮ್ಮ ದೃಷ್ಟಿಯು ಮಂದವಾಗಿರಬಹುದು. ನಿಮ್ಮ ಹೆಂಡತಿಯು ಇಲ್ಲೀಕೆ ಬರುವಳು? ಪರಪುರುಷನೊಡನೆ ಬಂದಿರಲಿಕ್ಕಿಲ್ಲ. ಇಲ್ಲ-ಇಲ್ಲ! ಅವಳೇ ಅಹುದು. ಅವನೇ ಆ ಚಾಂಡಾಲ ವಸಂತ! ಶಿವಶಿವ! ಎಂಥ ಅಧಮಾಧಮ ಕಾರ್ಯವಿದು? ಎಲೇ ನಿಮ್ಮ ಈ ಪಾಪಕಾರ್ಯಕ್ಕೆ ಈ ಧಾರವಾಡದಲ್ಲಿ ಬೇಕಾದಷ್ಟು ಗುಪ್ತಗೃಹಗಳೂ, ಅನುಕೂಲತೆಗಳೂ ಇದ್ದರೂ ಇಂಥ ಪ್ರಚಂಡ ಜನಸಮೂಹದಲ್ಲಿ ಈ ಬಗೆಯು ಹೇಸಿ ಕೆಲಸವೇ? ಥೂ-ಥೂ! ನಿಮ್ಮ ಮೋರೆಯ ಮೇಲೆ ಆ ವೇಶ್ಯಾ ವಸಂತಸೇನೆಯು ಸಹ ಉಗುಳಬಹುದು. ಅವಳು ದುರಾಚಾರಿಣಿ; ಆದರೆ ಕಮಲೇ ನಿನ್ನಂತೆ ಕುತ್ತಿಗೆ ಕೊಯ್ಯುವವಳಲ್ಲ. ನೀನು ಸಂಭಾವಿತ ವ್ಯಭಿಚಾರಿಣಿ, ಮನೆಮುರುಕ ಸೂಳೆ! ಆ ಶರ್ವಿಲಕನು ಕಳ್ಳ; ಆದರೆ ವಸಂತ ನೀನು ಸಂಭಾವಿತ ಚೋರ, ಪ್ರತಿಷ್ಠಿತ ದರೋಡೆಖೋರ! ಎಲೇ, ನಾನು ದುರ್ಬಲನೆಂದು ತಿಳಿದು ಈ ದುಷ್ಟಕಾರ್ಯಕ್ಕೆ ತೊಡಗಿದೆಯಲ್ಲವೇ! ಈಗಿಂದೀಗಲೇ ನೀನು ನಿಂತನಿಂತಲ್ಲೀ ನಿನ್ನ ಕುತ್ತಿಗೆಯನ್ನು ಹಿಚಿಕಿ, ನೆಲಕ್ಕೆ ಕೆಡವಿಬಿಟ್ಟೇನು. ಘಾತಕೀ, ನಿನ್ನನ್ನು ಕೊಲ್ಲುವದಕ್ಕೆ ಕತ್ತಿ ಬೇಡ; ಕಠಾರಿ ಬೇಡ; ಪಿಸ್ತೂಲು ಬೇಡ; ಯಾವದೂ ಬೇಕಾಗಿಲ್ಲ. ಸ್ವಾಭಿಮಾನಿ ಮನುಷ್ಯನಿಗೆ ಯಾವುದರ ಅವಶ್ಯಕತೆಯೂ ಇರುವದಿಲ್ಲ. ಸ್ವಾಭಿಮಾನವಿದ್ದ ಮೇಲೆ, ಶಸ್ತ್ರಾಸ್ತ್ರಗಳ ಅವಶ್ಯಕತೆಯಾದರೂ ಏನು! ದೈವೀತೇಜದೆದುರಿಗೆ ಆಸುರೀ ಅಂಧಕಾರವು ಎಷ್ಟು ಹೊತ್ತು ತಡೆಯುವದು? ಸ್ವಾಭಿಮಾನವೇ ನಮ್ಮ ಶಸ್ತ್ರವು! ವಿಶ್ವಾಸಘಾತಕೀ, ಸಭ್ಯತೆಯ ಸೋಗಿನಿಂದ ನನ್ನನ್ನು ವಂಚಿಸಿ ಇಂತಹ ನೀಚ ಕಾರ್ಯವನ್ನು ನಡೆಯಿಸಿರುವೆಯಲ್ಲವೆ? ಸಾಕು, ಇಲ್ಲಿಗೇ ಈ ನಾಟಕವು! ನನ್ನ ಮನೆಯಲ್ಲಿಯೇ ಇಂತಹ ಭಯಂಕರ ನಾಟಕವು ನಡೆದಿರಲು, ಪ್ರೇಕ್ಷಕರೇ, ಈ ಸ್ವಕಪೋಲ ಕಲ್ಪಿತ ನಾಟಕವನ್ನೇನು ನೋಡುವಿರಿ? ಇಗೋ ಈ ನಾಟಕದಲ್ಲಿ ದುರ್ದೈವಿಯಾದ ನಾನೇ ನಾಯಕನು! ಆ ವ್ಯಭಿಚಾರಿಣಿ ಕಮಲಾವತಿಯೇ ನಾಯಕಿಯು! ಆ ಪಾಪಿ ವಸಂತನೇ ಪ್ರತಿ ನಾಯಕನು! ಈ ದುರ್ದೈವಿ ನಾಯಕನೆದುರಿಗೇ ನಾಯಕಿ-ಪ್ರತಿನಾಯಕರು ವಿಲಾಸಮಗ್ನರಾಗಿರುವರು. ಇದನ್ನು ನೋಡಿಯೂ ನೋಡದವಂತೆ ಸುಮ್ಮನಿರಬೇಕಾಗಿದೆ. ಯಾಕೆಂದರೆ, ಈ ರಾಜ್ಯದಲ್ಲಿ ಯಾರಿಗೂ ಸೆರೆ ಕುಡಿಯಲಿಕ್ಕೆ ಅಡ್ಡಿಯಿಲ್ಲ; ಪರಸ್ತ್ರೀಯರನ್ನು ಓಡಿಸಿಕೊಂಡು ಹೋಗಲಿಕ್ಕೆ ಪ್ರತಿಬಂಧವಿಲ್ಲ; ಜೂಜಾಡುವದಕ್ಕೆ ನಿರೋಧವಿಲ್ಲ. ಎಂದ ಮೇಲೆ

ನನ್ನ ಹೆಂಡತಿಯು ಪರಕೀಯ ಡಾಕ್ಟರನ ಕೈಹಿಡಿದುಕೊಂಡು ನಾಟಕಕ್ಕೆ ಹೋದಳೆಂದು ಖಟ್ಲೆ ಮಾಡಿದರೆ ಕೇಳುವವರಾರು? ಅವಳು ಸ್ವಸಂತೋಷದಿಂದ ಹೋದಳೆಂದು ಪೋಲೀಸರು ಹೇಳುವರು! ನಾನು ಹೊಡೆದದ್ದಕ್ಕಾಗಿ ಮನೆ ಬಿಟ್ಟು ಹೋದಳೆಂದು ವಕೀಲರು ಹೇಳಿಕೊಡುವರು! ಅವಳು ಆ ಕಾಲಕ್ಕೆ ಹೊರಗೆ ಹೋದಳೆಂದೇ ಜೀವದಿಂದುಳಿದಳೆಂದು ಡಾಕ್ಟರರು ಸರ್ಟಿಫಿಕೇಟ ಕೊಡುವರು! ಇದೆಲ್ಲದರ ಮೇಲಿಂದ ಮ್ಯಾಜಿಸ್ಟ್ರೇಟರು ಹೇಳುವರು: "ಕೇಸ ಡಿಸ್ಮಿಸ್ಡ!" ಎಂದ ಮೇಲೆ ಸತ್ಯದ ಸಂರಕ್ಷಣೆಯಾಗುವದೆಂತು? ಈಗ ನಾನು ಇವಳನ್ನು ಕೊಂದರೆ ಏನಾಗುವದು? ನೆಟ್ಟಗೆ ಶೂಲಕ್ಕೇರಬೇಕಾಗುವದು! ಹಾಯ್! ಹಾಯ್! ಶ್ರೀಮಂತಿಕೆಯ ಸೊಕ್ಕಿನಿಂದ ವ್ಯರ್ಥವಾಗಿ ಪುನಃ ಲಗ್ನ ಮಾಡಿಕೊಂಡೆನು. ಮೊದಲಿನ ಹೆಂಡತಿಯು ಸತ್ತಾಗಲೇ ಈ ಮದುವೆಯ ಹವ್ಯಾಸವನ್ನು ಬಿಟ್ಟುಬಿಟ್ಟಿದ್ದರೆ ಈ ದುರ್ಘಟ ಪ್ರಸಂಗವೇ ಬರುತ್ತಿರಲಿಲ್ಲ. ಪತ್ನಿಯು ಸಾಯುತ್ತಲೇ, ಅವಳ ಚಿತೆಯ ಮೇಲೆಯೇ ಯಾರು ಅವಳ ಸಂಬಂಧವಾದ ಪ್ರೇಮಕ್ಕೆ ಅಗ್ನಿಸಂಸ್ಕಾರ ಮಾಡುತ್ತಾರೆಯೋ ಅಂತಹ ಪ್ರೇಮವಂಚಕರಿಗೆ ನನ್ನಂತಹ ಕಠೋರ ಶಾಸನವಾಗದೆ ಎಂದೂ ಬಿಡುವದಿಲ್ಲ. (ಸ್ವರ್ಗದ ಕಡೆಗೆ ನೋಡಿ) ಆಃ! ಸ್ವರ್ಗದೇವತೇ, ನನ್ನ ಅಪಮಾನ ಮಾಡಬೇಡ. ಈ ಜಗತ್ತಿನಲ್ಲಿ ಬಾಳುವದು ಬೇಡವಾಗಿ ನಿನ್ನ ಕಡೆಗೆ ಮೋರೆಯೆತ್ತಿರುವೆನು. ವಾರ್ಧಕ್ಯದಲ್ಲಿ ಈ ಕಮಲಾವತಿಯನ್ನು ಮಾಡಿಕೊಂಡುದು ಸಂಪೂರ್ಣ ತಪ್ಪು! ಬೇಗನೆ ಈ ಸೈತಾನೀ ಸಾಮ್ರಾಜ್ಯವನ್ನು ಬಿಡಿಸಿ ನಿನ್ನಲ್ಲಿ ಬರುವಂತೆ ಮಾಡಿಕೋ. ನಿಜವಾಗಿಯೂ ಈ ಪುರುಷಜಾತಿಯು ಅಸತ್ಯಸಂಧವಾದದ್ದು! ಪತಿಯು ಸತ್ತ ಮೇಲೆ ಪತ್ನಿಯು ಜೀವವಿರುವವರೆಗೂ ಆತನನ್ನು ನೆನೆದು ನೆನೆದು ಕೊರಗಿ ಸಾಯುತ್ತಾಳೆ; ಆದರೆ ಈ ನೀಚ ಪುರುಷ ಜಾತಿಯು ಹೆಂಡತಿಯು ಸ್ರ್ತ್ರೀತದೊಡನೆಯೇ ಆಕೆಯ ಪ್ರೇಮಕ್ಕೂ ಅಗ್ನಿಸಂಸ್ಕಾರಮಾಡಿ, ಯಾವ ತರುಣಿಯು ನಮ್ಮ ಅವಿಚಾರ ಪ್ರೇಮ ದಾವಾಲನದಲ್ಲಿ ತನ್ನ ಸುಕುಮಾರ ದೇಹವನ್ನು ನಗೆಮುಖದಿಂದ ಆಹುತಿ ಕೊಡುತ್ತಾಳೆಯೋ ಅವಳ ನೆನಪನ್ನು ಐದಾರು ತಿಂಗಳು ಸಹ ಇಡುವದಿಲ್ಲ. ಧಿಃಕಾರವಿರಲಿ ಈ ಪುರುಷಜಾತಿಗೆ!! ಆದರೆ ಕಮಲಾವತೀ, ಇನ್ನು ಎಚ್ಚರವಾಗಿರು! ಈ ಪಿಶಾಚ ವಿನಾಯಕರಾಯನು ಬೆನ್ನಹತ್ತಿರುವನು! ಪಿಶಾಚ! ಪಿಶಾಚ!! (ಎಂದು ಹೋಗುವನು.)

## ಪ್ರವೇಶ—೪

ಸ್ಥಳ—ಮಹಲು—ಕಮಲಾವತಿಯು ಬರುವಳು

ಪದ— ರಾಗ—ಭೀಮಪಲಾಸ ತಾಳ—ತ್ರಿವಟ

ಜಗದೀಶಾ ಪೊರೆಯೈ ದಹಿಪೆ | ಪ್ರೇಮ ನಿರಾಶೆಯ ತಾಪಾನಲದಿ ||ಪ||

ಪ್ರೇಮಭೂಮಿಕಾ, ಜಗದೇ ಮಾನವರ|ದೇವಾ ಸಂಸೃತಿ ಮಂದಿರ ವೈಭವಕೆ ||೧||

ನಮ್ಮವರಂತೂ ಮನೆಗೆ ಬಂದಿಲ್ಲ. ಇದೊಂದು ಯೋಗ್ಯವೇ ಆಯಿತು; ಇಲ್ಲದಿದ್ದರೆ ಸುಮ್ಮನೆ ತೊಂದರೆಯಲ್ಲಿ ಬೀಳುತ್ತಿದ್ದೆನು. ನಾಟಕವು ತಡವಾದರೂ ಮನಸ್ಸಿಗೆ ಹತ್ತಿದ ಕಳವಳವು ಪೂರ್ಣವಾಗಿ ಶಾಂತವಾಯಿತು. ಇದೆಲ್ಲ ನಿಜ; ಆದರೆ ನಾನು ಈ ಹೊತ್ತು ನಾಟಕಕ್ಕೆ ಹೋಗುವಾಗ ಪತಿಗೆ ತಿಳಿಯದಂತೆ ಹೋದದ್ದಲ್ಲದೆ, ಪರಪುರುಷನ ಸಂಗಡ ನಡೆದಿದ್ದೆನು. ಸ್ತ್ರೀಯರಿಗೆ ಪಾತಿವ್ರತ್ಯವೇ ಸರ್ವಾಲಂಕಾರವು ನಾನು ಪರಪುರುಷನ ಮೇಲೆ ಮನಸ್ಸು ಮಾಡಿದ್ದರಿಂದ ನನ್ನ ಪಾತಿವ್ರತ್ಯವೆಲ್ಲ ಹಾಳಾಯಿತೆನ್ನಲಿಕ್ಕೆ ಯಾವ ಅಡ್ಡಿಯೂ ಇಲ್ಲ. ಪರಮೇಶ್ವರಾ, ನಾನು ಎಷ್ಟು ಸುಶೀಲ ರೀತಿಯಿಂದ ಬಾಳ್ವೆಮಾಡಬೇಕೆಂದು ನನ್ನ ಬಾಲ್ಯದಲ್ಲಿ ನಿಶ್ಚಯ ಮಾಡಿಕೊಂಡಿದ್ದೆನೋ ಅದೆಲ್ಲ ಈಗ ಹಾಳಾಗಿಹೋಯಿತು! ಇದಕ್ಕೆ ಕಾರಣರು ಯಾರು? ನಾನಲ್ಲ, ನಿಶ್ಚಯವಾಗಿಯೂ ನಾನಲ್ಲ! ದುಡ್ಡಿನ ಆಶೆಗಾಗಿ ಆ ಮುದುಕನ ಕೊರಳಲ್ಲಿ ನನ್ನನ್ನು ಕಟ್ಟಿದ ಆ ನರರಾಕ್ಷಸಿಯೂ, ಕೇವಲ ವಿಷಯ ಸುಖಕ್ಕಾಗಿ ಹಿಂದುಮುಂದಿನ ವಿಚಾರವಿಲ್ಲದೆ ನನ್ನ ಕೈಹಿಡಿದ ಈ ಮುದಿಹದ್ದೂ ಇವರೇ ಈ ದೋಷಕ್ಕೆ ಪಾತ್ರರು. (ರಾವಬಹದ್ದೂರ ಬಂದು ಕೂಡ್ರುವನು) ಈ ಹೊತ್ತು ಮನೆಯವರ ಸ್ಥಿತಿಯು ಅತಿಶಾಂತವಾಗಿ ತೋರುತ್ತದೆ. ಇದಕ್ಕೆ ಕಾರಣವೇನಿರಬಹುದು? ಬಿರುಗಾಳಿಯ ಪೂರ್ವದಲ್ಲಿ ಸಮುದ್ರವು ಅತಿಶಾಂತವಾಗಿರುವದೆಂದು ಹೇಳುತ್ತಾರೆ; ಇದರಿಂದ ಮುಂದೇನಾದರೂ ಅನಿಷ್ಟವು ಬರಲಿಕ್ಕಿರಬಹುದೇ? ಇಲ್ಲ, ಇಲ್ಲ! ಪರಮೇಶ್ವರಾ! ಹಾಗೆ ಮಾತ್ರ ಮಾಡಬೇಡ; ಆದರೂ ನಿಜಸಂಗತಿಯು ಇವರಿಗೆ ತಿಳಿದಿಲ್ಲ; ಎಂದಬಳಿಕ ಯಾವ ಸಂಶಯವನ್ನೂ ತೆಗೆದುಕೊಳ್ಳುವ ಕಾರಣವಿಲ್ಲ (ಪ್ರಕಾಶವಾಗಿ) ಊಟಕ್ಕೆ ವೇಳೆಯಾಗಲಿಲ್ಲವೇ? ಯಾಕೋ ನನ್ನ ಪ್ರಕೃತಿಯು ಸರಿಯಾಗಿಲ್ಲ. ಬೇಗನೆ ಮಲಗಿದರೆ ಸ್ವಲ್ಪ ಶಾಂಗವಾಗಬಹುದು.

ವಿನಾಯಕ:—(ಸ್ವಗತಂ) ನಾನು ನಾಟಕಗೃಹದಲ್ಲಿ ಇವಳನ್ನು ನೋಡಿಯೇ ಇಲ್ಲವೆಂದು ತಿಳಿದಿರುವಳು. ಪಾಪಿಷ್ಠರಿಗೆ ಯಾವಾಗಲೂ ಹೀಗೆಯೇ ಮಿಥ್ಯಾಭ್ರಮೆಯಾಗುವದು ಬಹಳ, ಬೆಕ್ಕು ಕಣ್ಣುಮುಚ್ಚಿಕೊಂಡು ಹಾಲು ಕುಡಿ

ದರೆ ಅದನ್ನು ಯಾರೂ ನೋಡುವದೇ ಇಲ್ಲವೆ? ಸಂಕಟಗಳು ಯಾವಾಗಲೂ ಅವರ ಸುತ್ತುಮುತ್ತು ಸಿದ್ಧವಾಗಿ ನಿಂತೇ ಇರುತ್ತವೆ. ಇನ್ನು ಆಶ್ಚರ್ಯವೆಂದರೆ, ಯಾವಕಾಲಕ್ಕೆ ಕಷ್ಟಗಳು ಅತಿ ಸಮೀಪದಲಿರುತ್ತವೆಯೋ ಆಗ ಅವು ಅತಿ ದೂರವಾಗಿದ್ದಂತೆ ತಿಳಿದು ನಿಶ್ಚಿಂತರಾಗಿರುತ್ತಾರೆ. ಈ ಜಗತ್ತಿನಲ್ಲಿ ಪಾಪಿಷ್ಠನಂಥ ಆತ್ಮವಂಚಕನು ಬೇರೆ ಯಾರೂ ಅಲ್ಲ. (ಪ್ರಕಾಶಂ) ಮಾಡೋಣವಂತೆ ಊಟವನ್ನು; ನಿನಗೆ ಅಷ್ಟು ಅವಸರವಿದ್ದರೆ ಊಟಮಾಡಿ ಹೋಗಬಹುದು.

ಕಮಲಾವತಿ:—(ಸ್ವ) ಏನಿದು? ಈ ಮಾತಿನಿಂದ ಏನೋ ಸ್ವಲ್ಪ ಸಂಶಯವು ಬರುತ್ತದೆ. ಪರಮೇಶ್ವರಾ, ನಡುವೆ ಇದನ್ನೇನು ಉಪಸ್ಥಮಾಡಿದೆ? (ಪ್ರಕಾಶಂ) ವೇಳೆಯು ಬಹಳವಾಗಿರುವದರಿಂದ ತಮ್ಮ ಹೊಟ್ಟೆಯು ಹಸಿದಿರಬಹುದೆಂದು ಹಾಗೆ ಕೇಳಿದೆನಲ್ಲದೆ ನನಗೆ ಅವಸರವೇತರದು? ತಮ್ಮ ಸುಖಕ್ಕಿಂತ ನನಗೆ ಹೆಚ್ಚಿನದೇನೂ ಬೇಕಿಲ್ಲ

ವಿನಾಯಕ:—ಅಹುದಹುದು! ನೀನು ಬಹು ಪತಿವ್ರತೆಯೇ ಇರುವಿ! ಹಾಗಿಲ್ಲದಿದ್ದರೆ ನಾನಾಗಿ ನಿನ್ನನ್ನು ಮಾಡಿಕೊಳ್ಳುತ್ತಿದ್ದೆನಲ್ಲಿ? (ಜನಾಂತಿಕಂ) ಜೀವಕ್ಕೆ ಮೂಲವನ್ನು.

ಕಮಲಾ:—(ಸ್ವಗತಂ) ನಾನೆಷ್ಟು ಶಾಂತರೀತಿಯಿಂದಿರಬೇಕೆಂದರೂ ಕ್ಷುಬ್ಧವಾದ ಮಹಾಸಾಗರದ ತೆರೆಗಳಂತೆ ವಿಚಾರತರಂಗಗಳು ಒಂದೇಸವನೆ ಬಂದು ಮನಸ್ಸನ್ನು ಅಧೀರವಾಗಿ ಮಾಡುತ್ತವೆ. ಮನುಷ್ಯನ ಪ್ರಥಮ ಪಾಪಕಾರ್ಯವೆಂದರೆ ಧಗಧಗಿಸುವ ಅಗ್ನಿಯಿದ್ದಂತೆಯೇ. ಕ್ಷಣಕ್ಷಣಕ್ಕೆ ಅದು ಉತ್ತೇಜಿತವಾಗಿ ಮನುಷ್ಯನನ್ನು ಜೀವಂತವಾಗಿ ಸುಡುತ್ತದೆ. (ಪ್ರಕಾಶಂ) ತಾವೇನು ಮಾತನಾಡಿದರೂ ಅವು ನನಗೆ ಪ್ರೀತಿಯ ವಚನಗಳೇ. ಏಳಿರಿ, ಊಟಕ್ಕೆ ತಡವಾಗುವದು.

ವಿನಾಯಕ:—ಕಮಲಾವತಿಬಾಯಿಯವರೇ,

ಕಮಲಾ:-(ಸ್ವಗತಂ) ಏನಿದು ವಿಲಕ್ಷಣ ಸಂಬೋಧನವು! (ಪ್ರಕಾಶಂ) ಯಾಕೆ ಪ್ರಿಯನೇ?

ವಿನಾಯಕ:—ಯಾಕೂ ಇಲ್ಲ. ಹು! ಹೌದು! ಇಲ್ಲ ಇಲ್ಲ! ಹಾಗೆ ಸುಮ್ಮನೆ! ನಿಷ್ಕಾರಣವಾಗಿ.

ಕಮಲಾ:—ಇದೇನಿದು ಅವ್ಯಯ ಮಾಲಿಕೆ?

ವಿನಾಯಕ:—ಎಲ್ಲವೂ ವ್ಯಯವಾದ ಮೇಲೆ ಇನ್ನೆಲ್ಲಿಯ ಅವ್ಯಯ! ವಿವೇಕವಂತೂ ಮೊದಲೇ ವ್ಯಯವಾಗಿದೆ.

ಕಮಲಾ:-ಆದರೆ ಈಗ ಆ ವಿಚಾರವನ್ನು ಕಟ್ಟಿಕೊಂಡು ಮಾಡುವದೇನು?

ವಿನಾಯಕ:—ಮಾಡುವದೇನೂ ಇಲ್ಲವೆಂದೇ ಹೀಗೆ ಮಾತಾಡುವ ಧೈರ್ಯವಾಯಿತು. ನೀನು ಸಂಸ್ಕೃತವನ್ನು ಬಲ್ಲೆಯಲ್ಲವೇ?

ಕಮಲಾ:—ಹೌದು ಸ್ವಲ್ಪ ಬಲ್ಲೆನು. ತಾವೇ ಅಭ್ಯಾಸಮಾಡಿಸಿದಿರಲ್ಲವೆ?

ವಿನಾಯಕ:—ನಿಜ. ಆಗಲೆ ಆಫೀಸಿನಲ್ಲಿ ಕಾಳಿದಾಸನ ಶ್ಲೋಕವನ್ನೊಂದು ಓದಿದಾಗಿನಿಂದ ಮನಸ್ಸು ಬಹು ವಿಚಾರಗರ್ತದಲ್ಲಿ ಬಿದ್ದದೆ. ಆ ಶ್ಲೋಕದ ಅರ್ಥವು ಸರಿಯಾಗಿ ಆಗಲಿಲ್ಲ. ನಿನಗೆ ಅನುಭವವಿದ್ದರೆ ಹೇಳು.

ಕಮಲಾ:—ಆ ಶ್ಲೋಕವನ್ನಾದರೂ ಹೇಳಿರಿ.

ವಿನಾ:—ವೃದ್ಧೋ ಯುವಾ ಸಹ ಪರಿಚಯಾತ್ ತ್ಯಜ್ಯತೆ ಕಾಮಿನೀಭಿಃ|

ಕಮಲಾ—(ಸ್ವಗತಂ) ಏನಿದು, ನನ್ನನ್ನೇ ಉದ್ದೇಶಿಸಿ ಹೇಳುವಂತೆ ತೋರುತ್ತದೆ (ಪ್ರಕಾಶಂ) ಊಟವಾಗಲಿ, ಆ ಮೇಲೆ ಇದರ ಅರ್ಥವನ್ನು ಹೇಳುತ್ತೇನೆ.

ವಿನಾಯಕ—ಯಾಕೆ, ಈಗಲೇ ಹೇಳಲಿಕ್ಕೇನಾಗಿದೆ? ಹೇಳು-ಹೇಳು. ನಿನಗೆ ಶಬ್ದಶಃ ಅರ್ಥವಾಗದಿದ್ದರೆ ನಿನಗೆ ಅನುಭವವಿದ್ದಮಟ್ಟಿಗೆ ಭಾವವನ್ನಾದರೂ ತಿಳಿಸು.

ಕಮಲಾ—(ಸ್ವಗತಂ) ಇವನಂತೂ ಸಂಪೂರ್ಣ ಸಂಶಯದಿಂದಲೇ ಮಾತಾಡುತ್ತಿರುವನು. (ಪ್ರಕಾಶಂ) ಈ ವಾಕ್ಯದ ಅನುಭವವು ನನಗಿಲ್ಲ. ಆದರೂ ವಾಕ್ಯಾರ್ಥವನ್ನು ಹೇಳುತ್ತೇನೆ. 'ಕಾಮಿನಿಯರಿಗೆ ಯುವಕರ ಸಹ ಪರಿಚಯವಾದರೆ ಅವರು ಮುದುಕರನ್ನು ಬಿಡುವರು' ಎಂಬದೇ ಅರ್ಥವು.

ವಿನಾಯಕ—ಇಷ್ಟೇ. ಅದನ್ನು ನೆನಪಿನಲ್ಲಿಟ್ಟರೆ ಸಾಕು. (ಸ್ವ) ಆಃ! ಕ್ಷಣ ಕ್ಷಣಕ್ಕೂ ತಪ್ತಲೋಹರಸದಲ್ಲಿ ಹೊರಳಾಡಿಸಿ ಎದ್ದಿ ಎದ್ದಿ ತೆಗೆದಂತಾಗುತ್ತಿರುವದು. ನರಕವಾಸವೆಂದರೆ ಇದೇ; ಅಥವಾ ಇದಕ್ಕಿಂತ ಹೆಚ್ಚಿನ ನರಕವಾಸವಿನ್ನಾವದು? ಪದ— ಹಮುಸೇ ತುಮುರಾ.

ಘನತಾಪವನು ತಾಳಲಾರೆ ನಾ | ವನಜನಾಭನೆ ತೋರು ಸುಗತಿಯ ||ಪ||
ನೀರೊಳು ತೋರುವ | ಪರಿಯಾದೀ ಪದ | ತೆರದ ನಾರಿಯು | ಪ್ರಣಯು
ಬೇಡುವಗೆ | ಮಾರಣವೆ ಗತಿ || ೧||

---

## ಪ್ರವೇಶ—೫

ಸ್ಥಳ—ರಸ್ತೆ—ಕಮಲಾವತಿಯು ಬರುವಳು.

**ಕಮಲಾ:**—ಸುಮಾರು ಮೂರುಗಂಟೆಯಾಗಿರಬಹುದು. ಪತಿಗೆ ತಿಳಿಯದಂತೆ ಬರಬೇಕಾದುದರಿಂದ ಗಡಿಯಾರವನ್ನು ನೋಡುವದೊತ್ತಟ್ಟಿಗಿರಲಿ, ಗಟ್ಟಿಯಾಗಿ ಶ್ವಾಸವನ್ನು ಬಿಡುವದಕ್ಕೆ ಸಹ ಧೈರ್ಯವಾಗಲಿಲ್ಲ! ದುರ್ದೈವವೇ, ಕಡೆಗೆ ಎಂಥ ದುರ್ದಶೆಗೆ ಈಡುಮಾಡಿದೆಯಲ್ಲ! ಮೊದಲು ವಸಂತರಾಯರೇ ನನ್ನ ಹೃದಯ ರಮಣನಾಗುವನೆಂದು ತಿಳಿದು ನನ್ನ ಪ್ರೇಮಭಂಡಾರವನ್ನೆಲ್ಲ ಅವರಿಗೆ ಒಪ್ಪಿಸಿದೆನು; ಆದರೆ ವಿಧಾತನ ಇಚ್ಛೆಯು ವಿರುದ್ಧವಾದುದರಿಂದ ಅವರನ್ನು ಬಿಟ್ಟು ಮುದುಕ ವಿನಾಯಕರಾಯರನ್ನು ಪ್ರೀತಿಸಬೇಕಾಯಿತು; ಪುನಃ ವಸಂತರಾಯರ ದರ್ಶನವಾಗುತ್ತಲೇ ವಿನಾಯಕರಾಯರ ಮೇಲಿನ ಪ್ರೇಮವು ಪರಿವರ್ತನಹೊಂದಿ ಮತ್ತೆ ವಸಂತರಾಯರನ್ನಾವರಿಸಿತು. ಸ್ತ್ರೀಯರ ಪಾತಿವ್ರತ್ಯವೇ ದೇಶದ ಸುಖ-ಶಾಂತಿಗಳ ಮೂಲವು; ಆದರೆ ಮುದುಕರು ವಿಲಾಸವಶರಾಗಿ ನಮ್ಮಂಥ ತರುಣಿಯರನ್ನು ಮಾಡಿಕೊಂಡು ದುರ್ಮಾರ್ಗಕ್ಕೆ ದೂಡಿಬಿಡುವರು. ವೃದ್ಧ, ಅನುಭವಿಕ, ವಿಚಾರಿ, ಯತಿ, ಋಷಿ ಮತ್ತು ತಪಸ್ವಿಗಳು ಜಯಿಸದ ಕಾಮನನ್ನು ಚಂಚಲ ತರುಣಿಯರು ಗೆಲ್ಲುವದೆಂತು? ಸಿಂಹ-ಶಾರ್ದೂಲಾದಿಗಳು ದಾಟಿ ಬರಲಾರದ ಬಲೆಯನ್ನು ಹರಿಣಾಂಗನೆಗಳು ಪಾರಾಗಿ ಬರುವದಕ್ಕೆ ಕಾಲತ್ರಯದಲ್ಲಿಯೂ ಸಾಧ್ಯವಿಲ್ಲ. ಈ ಪಾಪಕಾರ್ಯದ ಪ್ರತಿಬಿಂಬವಾದ ಈ ಭೀಷಣ ರಾತ್ರಿಯು ಭೀಕರತೆಯಾದರೂ ಎಷ್ಟಿದು! ದೇವಾ, ನಾಳೆ ನನ್ನ ಮುಖದ ಮೇಲೆಯೂ ಇದೇ ಕಪ್ಪು ಛಾಯೆಯೇ ಪಸರಿಸುವದಲ್ಲವೇ? ಏನಿದು? ನನ್ನ ಸುತ್ತಲು ಭಯಂಕರ ಶ್ವಾಪದಗಳು ಬಾಯಿತೆರೆದು ಬರುವಂತೆ ಭಾಸವಾಗುತ್ತದೆ; ಮೇಲೆ ಯಮದೂತರು ಕರಾಲ ಖಡ್ಗವನ್ನು ಬೀಸುತ್ತಿರುವರು! ಅಬ್ಬ ಸಾಕು, ಇಷ್ಟೇ ನರಕಯಾತನೆಯು ಸಾಕು! ಅಗ್ನಿ ಸಾಕ್ಷಿಯಾಗಿ, ಗುರು-ಹಿರಿಯರ ಸಾಕ್ಷಿಯಾಗಿ, ಆದಿತ್ಯಾದಿ ಗ್ರಹಗಳ ಸಾಕ್ಷಿಯಾಗಿ ಕೈಹಿಡಿದ ಗಂಡನನ್ನು ವಂಚಿಸಿ, ಪರಪುರುಷನನ್ನು ಮೋಹಿಸುವ ದುರುಳ ಹೆಂಗಸರಿಗೆ ಈ ನರಕವಾಸವು ತಪ್ಪಿದ್ದಲ್ಲ ಈ ದುಷ್ಟ ಸಮಾಜದ ಪಾಪಿ ರೂಢಿಗಳಿಂದ ಇನ್ನೂ ಎಷ್ಟು ಜನ ತರುಣಿಯರು ದುರ್ಮಾರ್ಗಕ್ಕೆ ಬೀಳುವರೋ ಕಾಣೆ. ಇರಲಿ! ಈಗ ವಸಂತರಾಯನಿಗೆ ಬುದ್ಧಿವಾದವನ್ನು ಹೇಳಿ ನೋಡುತ್ತೇನೆ. ಅದಕ್ಕೆ ಅವನು ಒಪ್ಪದೆ ಬಲಾತ್ಕರಿಸಲಿಕ್ಕೆ ಬಂದರೆ ಹೇಗೆ ಮಾಡಬೇಕು? ಹಾ! ನೆನಪಾಯಿತು. ಇನ್ನು ಈ ಭೂಮಿಯಲ್ಲಿ

ಬದುಕುವದರಲ್ಲಿ ಏನೂ ಅರ್ಥವಿಲ್ಲ. ಹೇಗೂ ನನ್ನ ಕಡೆಗೆ ಕೀಲಿಕೈಸರವಿದೆ. ಕಪಾಟದೊಳಗಿಂದ ವಿಷದ ಬಾಟ್ಲಿಯನ್ನು ತೆಗೆದುಕೊಂಡು ಹತ್ತರಿಟ್ಟುಕೊಳ್ಳುವೆನು. ಪ್ರಸಂಗ ಬಂದರೆ ಅದನ್ನು ಕುಡಿದು ಬಿಟ್ಟರಾಯಿತು.

ಪದ ರಾಗ—ಜೀವನಪುರೀ. ತಾಳ—ತ್ರಿವಟ.

ತನುಹಿತಾ ಪ್ರೇಮಾಂಬು ವಿರಹಿತಾ ತಾ ಬಾಳ್ವುದೇ? ||ಪಲ್ಲ||
ಹೀನ ವಿಷಯ ವಾ|ಸನೆಯು ತೋರದ|ವಿನೂತನ ದೇವನ ಕಾಂಬೆನಾ ||೧||

(ಹೋಗುವಳು)

ವಿನಾಯಕ—(ಬಂದು) ಕಮಲಾವತೀ, ವಸಂತಾ, ಇಂದಿಗೇ ನಿಮ್ಮ ಆಯುಷ್ಯವು ಮುಗಿಯಿತೆಂದು ತಿಳಿಯಿರಿ. ಎಲೇ ನಿಮ್ಮ ಅನುರಾಗದ ರಾಗವು ರಕ್ತರೂಪದಿಂದ ಈ ಸುರಿಗೆಯ ಮೇಲೆ ಬಳಿದು ಬರುವಂತೆ ಇದು ನಿಮ್ಮ ಎದೆಯಲ್ಲಿ ನಟ್ಟು ಪಾರಾದ ಹೊರತು ಇನ್ನು ಈ ವಿನಾಯಕರಾಯನಿಗೆ ಶಾಂತಿಯೆಲ್ಲಿ? ವಸಂತಾ, ನೀನು ಸುಶಿಕ್ಷಿತನೆಂದೂ ಶಿಕ್ಷಣದಿಂದ ನಿನ್ನ ಮನಸ್ಸು ಸುಧಾರಿಸಿರಬಹುದೆಂದೂ ತಿಳಿದು ನಿನ್ನನ್ನು ಮನೆಯಲ್ಲಿ ಬರಗೊಟ್ಟೆನು. ಅದಕ್ಕೆ ಒಳ್ಳೇ ಫಲವನ್ನು ಕೊಟ್ಟೆ. ಎಲೇ ಪತಿಘಾತಿನೀ ಕಮಲೇ, ಇದರಲ್ಲಿ ನಿನ್ನ ದೋಷವು ಬಹಳವಾಗಿಲ್ಲದಿದ್ದರೂ ನನ್ನ ಮಾನವನ್ನುಳಿಸಿಕೊಳ್ಳುವದಕ್ಕಾಗಿ ನಿನ್ನನ್ನು ಕೊಲ್ಲಬೇಕಾಗಿದೆ. ಕೋಟಿಗಟ್ಲೆ ಬಾಲವಿಧವೆಯರು ಚಿಂತಾಗ್ನಿಯಲ್ಲಿ ಸುಟ್ಟು ಹೋಗುತ್ತಿದ್ದರೂ ಮುಪ್ಪಿನಕಾಲದಲ್ಲಿ ಮದುವೆಯ ಮರುಳು ಹಿಡಿಸಿದ್ದು ಈ ಶ್ರೀಮಂತಿಕೆಯೇ ಅಲ್ಲವೆ? ವಿಧವಾವಿವಾಹ ಫಂಡಿಗೆ ಈ ಆಸ್ತಿಯನ್ನು ಸೇರಿಸತಕ್ಕದ್ದೆಂದು ವಿಶ್ವಾಸರಾಯರ ಹೆಸರಿನಿಂದ ಉಯಿಲು ಬರೆದು ಟಪಾಲಿಗೆ ಹಾಕಿ ಬಂದೆನು. (ಕೈಯಲ್ಲಿಯ ಕತ್ತಿಯನ್ನು ನೋಡಿ) ಎಲೈ ಜೀವಸ್ಮಿತ್ರ ಖಡ್ಗವೇ, ಮಿತ್ರಕಾರ್ಯವನ್ನು ಸರಿಯಾಗಿ ಮಾಡು. ಒಂದೇ ಸಾರೆಗೆ ಅವರಿಬ್ಬರ ಪ್ರಾಣಗಳೂ ಹಾರಬೇಕು ಕಂಡೆಯಾ! ಬಾಹುಗಳೇ, ಶೇಷಾಯುಷ್ಯದ ಶಕ್ತಿಯನ್ನು ಒಟ್ಟುಗೂಡಿಸಿ ಇಂದೇ ಸಿದ್ಧವಾಗಿರಬೇಕು. ಓಹೋ! ಕಮಲಾವತಿಯು ದೂರ ಹೋದಳು. ಬೇಗನೆ ಹೋಗುತ್ತೇನೆ. (ಹೋಗುವನು)

ಡಾ. ವಸಂತ:—(ಬಂದು) ಮದನ, ಇಷ್ಟೇಕೆ ಕಾಡಿಸುವೆ? ಈ ಗಡಿಯಾರದ ಮುಳ್ಳುಗಳಿಗೆ ಏನು ಜಡವಾಗಿದೆಯೋ ಸ್ವಲ್ಪವೂ ಸರಿದಾಡುವದಿಲ್ಲ. ಈ ಅಮಾವಾಸ್ಯೆಯ ಕಗ್ಗತ್ತಲೆಯಲ್ಲಿ ಸೂರ್ಯ-ಚಂದ್ರರಿಬ್ಬರೂ ಮರೆಯಾದಂತೆ ಈ ನಕ್ಷತ್ರಗಳೂ ಏಕೆ ಅಡಗಬಾರದು? ಅಥವಾ ಈ ರಾತ್ರಿಯೇ ಮನೋವೇಗದಿಂದ ಏಕೆ ಸರಿಯಬಾರದು? ಆಃ! ಈ ವರ್ತಮಾನ ಸಂಕ್ರಮಣಕಾಲದಲ್ಲಿ ಭೂತ-ಭವಿ

ಷ್ಯತ್ ಕಾಲಗಳ ಚಿತ್ರವು ಒಮ್ಮೆಲೆ ಕಣ್ಣೆದುರಿಗೆ ಕಟ್ಟಲು ಮನಸ್ಸು ಅತ್ಯಂತ ಅಧೀರವಾಗುವದು. ಇಂದು ಆ ಕಮಲಾವತಿಯು ವಿನಾಯಕರಾಯನ ಧರ್ಮ ಪತ್ನಿ; ಆದರೆ ನಾಳೆ ಸರ್ವಸ್ವೀ ನನ್ನವಳೇ! ಇಂದಿನ ಈ ಸಾಹಸವು ಉತ್ತರ ಧ್ರುವದ ಶೋಧಕ್ಕಿಂತಲೂ ಅಧಿಕತರವಾದದ್ದು. ಈ ದವಾಖಾನೆಯನ್ನಾರಂಭಿ ಸುವಾಗ ಇದು ಒಬ್ಬ ಸೌಂದರ್ಯವತಿಯೊಡನೆ ನನ್ನ ವಿಲಾಸ ಮಂದಿರವಾಗುವದೆಂಬ ಕಲ್ಪನೆಯು ಸ್ವಪ್ನದಲ್ಲಿಯೂ ಬಂದಿರಲಿಲ್ಲ. ಇಂದು ಅದು ಸತ್ಯವಾಗುವದು. ನಾನು ಯಾವ ಶುದ್ಧ ಮುಹೂರ್ತದಲ್ಲಿ ಈ ದವಾಖಾನೆಯನ್ನು ತೆಗೆದಿರಬಹುದು! ಕರ್ನಾ ಟಕದಲ್ಲಿಯ ಕವೀಶ್ವರ-ಕಪೀಶ್ವರರೇ, ಜ್ಞಾತವಾಸಿ-ಅಜ್ಞಾತವಾಸಿಗಳೇ, ಶಾರದಾ ಶ್ರಮವಾಸಿ-ಇಂದಿರಾಶ್ರಮವಾಸಿಗಳೇ, ಅರವಿಂದ-ಮಕರಂದರೇ, ಕಾವ್ಯಾನಂದ-ದ್ರವ್ಯಾನಂದರೇ. ಅತಿಮಂದ-ಮತಿಮಂದರೇ ಮತ್ತು ಆನಂದರಾವ-ವಿಷಾದ ರಾಯರೇ ಬನ್ನಿ, ಮುಂದೆ ಬನ್ನಿ! ಉಗಿಬಂಡಿ, ಬಾಯಿಸ್ಸಿಕಲ್ಲುಗಳ ಮೇಲೆ ವ್ಯರ್ಥ ವಾಗಿ ಪದ್ಯಮಾಡುವ ಶ್ರಮವನ್ನು ಬಿಟ್ಟು ಈ ತರುಣ-ತರುಣಿಯರ ವಿಲಾಸ ವಿಷಯವನ್ನು ಕಣ್ಮುಟ್ಟ ನೋಡಿರಿ. ಪ್ರಿಯಾ ಪ್ರಿಯಕರರ ಸ್ಥಿತಿಯನ್ನು ವರ್ಣಿ ಸುವದಕ್ಕೆ ಇನ್ನು ಆ ರಾಧಾಮಾಧವರಿಗೆ ತೊಂದರೆ ಕೊಡುವ ಕಾರಣವಿಲ್ಲ. ಭಗ ವಾನ್ ಅನಂಗರಂಗನ ಆಜ್ಞೆಯಂತೆ ಇಂದು ಮೂರು ಗಂಟೆಗೆ....

ಪದ— ರಾಗ — ಖಮಾಜ ತಾಳ—ತ್ರಿವಟ

ಯೋಷಿತಾ ಒಹು ವಿಲಾಸ ರತಾ | ವಸುಧೆಯೊಳೀ ಸುಧಾತಿರೇಕ ಸತತ ವಾಸತಾ ||ಪಲ್ಲ|| ವಿಮಲವದನ ಚಂದಿರ ನಮುಮ | ಅಮೃತಧಾಮ | ಸುಮಧುರ ಬಿಂಬಧರ ಸುಧೆಯಧಾರ | ಅಮಿತ ಸುಖಸಾರ || ೧ ||

---

## ಪ್ರವೇಶ:—೪

ದವಾಖಾನೆ:— ಕಮಲಾವತಿ ಕುಳಿತಿರುವಳು.

ಕಮಲಾ—ರಾಗ—ಕಾಲಂಗಡಾ. ತಾಳ—ದೀಪಚಂದೀ.

ವಿಧಿಯು ತಾ ವಿಷಮತಾ ತಾಪಪ್ರದಾತ | ವೇದವಿಖ್ಯಾತ || ಪಲ್ಲ ||
ನಾನೀಗ ಫಲಿಸುವಲತೆಯ | ಆ ಸಮಯದೆ ಬರಿದೆ ಘಾತಿಪೆ ಸಮೂಲ||೧||

ಪ್ರೇಮಾಮೃತವನ್ನು ಪಾನಮಾಡಬೇಕೆಂದಿದ್ದ ನಾನು ಕೊನೆಗೆ ಈ ವಿಷ ವನ್ನು ಕುಡಿಯಬೇಕಾಯಿತಲ್ಲವೇ? (ಕಿಸೆಯಲ್ಲಿಡುವಳು.)

ವಿನಾಯಕ—(ಮೆಲ್ಲಗೆ ಬಂದು)ಆ ಅಧಮಾಧಮನು ಬರುವಂತೆ ಕಾಣು ತ್ತದೆ. ಇಲ್ಲಿಯೇ ಮರೆಯಾಗುವೆನು.

ಡಾ. ವಸಂತ—ಆಃ ದಿವ್ಯಸುಂದರೀ.

ಪದ—ಹಂಸಧ್ವನಿ—ತಾಳ—ದಾದರಾ.

ಸುರರಮಣಿ ಮನೋಜಗಿಣಿ ಜಾಣೆ ರಾಗಿಣಿ | ತರುಣೀ || ಪಲ್ಲ ||

ಕಲವಾಣಿ ಸುದತೀಮಣೀ | ವರಗುಣಖನಿ ನೋಡಗಿವಿ ಹೇ || ಅ. ಪ. ||

ಮನಸಿಜ ತಾಪವನೇ ತರಿ | ಬೀರು ಸೌಖ್ಯವ || ಮನಮೋಹಾಕರೆ ಬಾರೆ |

ಘನಶಾಂತಿಯು ಕೊಡು ನೀರೆ || ೧ ||

(ಕಮಲಾವತಿಯು ಕೈ ಹಿಡಿಯು ಹೋಗಲು ದೂರ ನಿಲ್ಲಲು ಸಂಜ್ಞೆ ಮಾಡುವಳು.)

ಕಮಲಾ—ಡಾಕ್ಟರ, ಒಳ್ಳೇ ಹೊತ್ತಿಗೆ ಬಂದಿರಿ. ನೀವು ಎಲ್ಲಿ ತಡಮಾಡುವಿರೊ ಎಂದು ಮನಸ್ಸು ಒಂದೇಸವನೆ ಕಳವಳಿಸುತ್ತಿತ್ತು.

ವಸಂತ—ನನಗೂ ಸಹ ೩ ಗಂಟೆ ಯಾವಾಗ ಆದೀತೋ ಎಂದು ಒಂದೇಸವನೆ ಕಳವಳಹತ್ತಿತ್ತು. ಇಂಥ ಗೋಲ್ಡನ್ ಅಪರ್ಚುನಿಟಿ ಕಳಕೊಳ್ಳಲಿಕ್ಕೆ ನಾನೇನು ಅರಸಿಕ ವೃದ್ಧ ವಿನಾಯಕರಾಯನಲ್ಲ.

ವಿನಾಯಕ—(ಜನಾಂತಿಕಂ) ತಾರುಣ್ಯ-ವಾರ್ಧಕ್ಯಗಳ ಪರೀಕ್ಷೆಯು ಈಗಲೇ ಆಗಿಹೋಗುವದು.

ಕಮಲಾ—ವಸಂತರಾವ ನಿಮ್ಮೆದುರಿಗೆ ಒಂದು ಸಂಗತಿ ಹೇಳಬೇಕಾಗಿದೆ.

ವಸಂತ—ಅದಕ್ಕೆ ತಡವೇಕೆ? ಬೇಗನೆ ಹೇಳು.

ಕಮಲಾ—ನಿಮ್ಮಲ್ಲೊಂದು ಬೇಡಿಕೆಯಿದೆ.

ವಸಂತ—ಬೇಕಾದದ್ದನ್ನು ಬೇಡು. ಸುಮ್ಮನೆ ಕಾಲಕಳೆಯಬೇಡ.

ಕಮಲಾ—ನನ್ನ ಮೇಲೆ ನಿಮ್ಮ ಪ್ರೇಮವಿರುವದಲ್ಲವೇ?

ವಿನಾಯಕ—(ಜನಾಂತಿಕಂ) ಅದಕ್ಕಾಗಿಯೇ ಇಂಥ ಅಪರಾತ್ರಿಯಲ್ಲಿ ತಗ್ಗುತ್ತ-ಮುಗ್ಗುತ್ತ ಬಂದಿರುವೆನಲ್ಲವೇ?

ವಸಂತ—ಕಮಲಾವತೀ, ಇದೇನು ಕೇಳುವದು? ನಿನ್ನ ಪ್ರೇಮಕ್ಕಾಗಿಯೇ ಈಗ ಮೂರು ತಿಂಗಳುಗಳಿಂದ ಒಂದೇಸವನೆ ಪ್ರಯತ್ನಿಸುತ್ತಿರುವೆನಲ್ಲವೇ?

ಕಮಲಾ--ನಾನೀಗ ನಿಮ್ಮಲ್ಲಿ ಒಂದು ಬೇಡಿಕೆಯನ್ನು ಬೇಡಿದರೆ ಅದನ್ನು ಕೊಡುವಿರಲ್ಲವೆ?

ವಸಂತ—ಪ್ರಾಣಗಳನ್ನು ಕೇಳಿದರೂ ಸಹ ಕೊಡಲಿಕ್ಕೆ ಸಿದ್ಧವಿದ್ದೇನೆ. ಇದಕ್ಕಿಂತ ಹೆಚ್ಚಿಗಿನ್ನೇನು ಹೇಳಲಿ?

ವಿನಾಯಕ—(ಜನಾಂತಿಕಂ) ಆ ಪ್ರಾಣಗಳನ್ನು ತಕ್ಕೊಳ್ಳಲಿಕ್ಕೆ ನಾನಿಲ್ಲಿ ಸಿದ್ಧನಾಗಿ ನಿಂತಿದ್ದೇನೆ. ಅದರ ಹೊರತು ಬೇರೆ ಏನಾದರೂ ಇದ್ದರೆ ಆಕೆಗೆ ಕೊಡು.

ಕಮಲಾ—ತಮಗೆ ಕೆಡಕೆನಿಸಲಿಕ್ಕಿಲ್ಲವೇ?

ವಸಂತ—ಇಂಥ ಸಂಶಯವನ್ನು ಮುಂದೆ ಎಂದೂ ಮನಸ್ಸಿನಲ್ಲಿ ಬರಗೊಡಬೇಡ.

ವಿನಾ—(ಜನಾಂತಿಕಂ) ಇನ್ನು ಮುಂದೆ ಬದುಕಿದ್ದರೆ ಈ ಮಾತು ನಿಜ.

ಕಮಲಾ—ನಿಮಗೆ ಸಿಟ್ಟು ಬರಲಿಕ್ಕಿಲ್ಲವೇ?

ವಿನಾಯಕ—(ಜನಾಂತಿಕಂ) ಕಾಮುಕರಿಗೆ ಸಿಟ್ಟೆಲ್ಲಿಯದು? ಆಕೆಯು ಎರಡುಸಾರೆ ಒದ್ದರೂ ಒದಿಸಿಕೊಳ್ಳಲಿಕ್ಕೆ ಸಿದ್ಧರಿರುತ್ತಾರೆ.

ವಸಂತ—ನಿಮ್ಮ ಬೇಡಿಕೆಗೆ ಸಿಟ್ಟು ಬರುವದೆಂದರೇನು ಮನೋಹರೇ!

ಕಮಲಾ—ಹಾಗಾದರೆ ಕೇಳಲೇ? ವಸಂತ—ಕೇಳು.

ಕಮಲಾ—ಕೇಳಲೇ? ವಸಂತ—ಕೇಳುಬೇಕಾದ್ದನ್ನು ಕೇಳು.

ಕಮಲಾ—ಕೇಳಲೇ ಹಾಗಾದರೆ?

ವಸಂತ—ಆಗಲೇ ಹೇಳಿದೆನಲ್ಲವೇ? ಕೇಳು ಬೇಕಾದ್ದನ್ನು ಬೇಕಾದಂತೆ ಕೇಳು. (ಸ್ವಗತಂ) ಈಕೆಯು ಬೇಡುವದಾದರೂ ಏನು? ಆಭರಣವನ್ನು ಬೇಡುತ್ತಿರಬಹುದು. ಹೆಂಗಸರಿಗೆ ಇದರ ಹುಚ್ಚು ಬಹಳ. ಈ ಹುಚ್ಚಿಗಾಗಿಯೇ ಇವರ ತಾಯಿಯು ಇಷ್ಟೆಲ್ಲ ಅನರ್ಥ ಮಾಡಿಟ್ಟಳು. ಈಕೆಯ ಬೇಡಿಕೆಯನ್ನು ನೋಡಿದರೆ ಆಭರಣವು ಬಹಳ ಬೆಲೆಯುಳ್ಳದ್ದಿರಬಹುದು. ಅದಕ್ಕಾಗಿಯೇ ಹೀಗೆ ಮೇಲಿಂದ ಮೇಲೆ ಒಪ್ಪಿಗೆಯನ್ನು ಕೇಳುತ್ತಿರುವಳು. ಅದು ಒಂದು ವೇಳೆ ನನ್ನ ಶಕ್ತಿಗೆ ಮೀರಿದ್ದಾಗಿದ್ದರೆ? ಛೀ, ಛೀ, ಇದು ಅರಸಿಕತನದ ಮಾತು. ಬೇಕಾದರೆ ಈ ದವಾಖಾನೆಯನ್ನಾದರೂ ಒತ್ತೆಯಿಟ್ಟು ಇವಳ ಇಚ್ಛೆಯನ್ನು ಪೂರಯಿಸಬೇಕು

ವಿನಾಯಕ—(ಜನಾಂತಿಕಂ)ಇವಳ ಮುಖಚರ್ಯೆಯನ್ನು ನೋಡಿದರೆ ಈ ಬೇಡಿಕೆಯಲ್ಲೇನೋ ರಹಸ್ಯವಿರುವಂತೆ ತೋರುತ್ತದೆ.

ಕಮಲಾ— ಡಾಕ್ಟರ, ನನಗೊಂದು ವರವನ್ನು ಕೊಡುವದಿಲ್ಲವೇ?

ವಸಂತ—ಹೇಳು, ಬೇಗನೆ ಹೇಳು ಏನದು? ಕೊಡಲಿಕ್ಕೆ ಸಿದ್ಧನೇ ಇದ್ದೇನೆ.

ಕಮಲಾ—ಕೇಳಿರಿ ಹಾಗಾದರೆ.

ಪದ—(ಪತಿಯ ಮಹತ್ವ) ರಾಗ—ಕಾಫೀಜಿಲ್ಲಾ. ತಾಳ—ಕವಾಲಿ.

ಸತ್ಯವಿದೇ ಪರನಾರೀ ನಾಕ | ಪತಿಯ ವಿಲೋಲ ಆ ಪದಯುಗಲ ||ಪ||

ಭರ್ತೃವಿಘಾತಿನಿಯಾದ ನಾಗಿಣಿ | ನರಕವಾಸಿನಿ ತಾ ಸದಾ ||೧||

ಇಂದಿನಿಂದ ನನಗೆಂದಿಗೂ ಈ ಮೋರೆಯನ್ನು ತೋರಿಸದಂತೆ ಈಗಿಂ-ದಿಗಲೇ ಹೊರಟು ಹೋಗಬೇಕು.

ವಿನಾಯಕ—(ಜನಾಂತಿಕಂ) ಏನಿದು? ಚಾತಕಪಕ್ಷಿಯು ಮಳೆಯ ದಾರಿಯನ್ನು ನೋಡುತ್ತಿರಲು ಅಕಸ್ಮಾತ್ತಾಗಿ ಮಳೆಯ ಬದಲು ಸಿಡಿಲು ಬಡಿಯಿತಲ್ಲ! ಇನ್ನೂ ಏನೇನಾಗುವದೋ ನೋಡೋಣ.

ವಸಂತ—ಕಮಲಾವತೀ, ಇದೇನು ಹೇಳುತ್ತಿರುವೆ?

ಕಮಲಾ—ಹೌದು ಡಾಕ್ಟರ, ಇಲ್ಲಿಯ ವರೆಗೆ ನಿಮ್ಮಿಂದ ಬಹು ದೊಡ್ಡ ತಪ್ಪಾಗಿದೆ ನನ್ನಿಂದಲೂ ಮಹಾಪರಾಧವು ಘಟಿಸಿದೆ; ಆದರೆ ಆದದ್ದು ಆಗಿ ಹೋಯಿತು, ಇನ್ನು ಮುಂದೆ ಮಾತ್ರ ಈ ಮುಖವನ್ನು ನನಗೆ ತೋರಿಸಬೇಡಿರಿ.

ವಿನಾಯಕ—(ಜನಾಂತಿಕಂ) ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ.

ವಸಂತ—ಕಮಲಾವತೀ, ಹೀಗೆ ತಿರಸ್ಕಾರದ ಮಾತುಗಳನ್ನಾಡಲಿಕ್ಕೆ ನನ್ನ ಕೈಯಿಂದ ಆಗಿರುವ ಮಹಾಪರಾಧವಾದರೂ ಯಾವದು? ನೀವು ಹೀಗೇಕೆ ಮಾಡುತ್ತಿರುವಿರಿ?

ಕಮಲಾ—ನನ್ನ ಗುರುವಿನ ಅಪ್ಪಣೆಯಾಗಿರುವದೆಂದು.

ವಸಂತ—ಗುರುವಿನ ಆಜ್ಞೆಯೆ?

ವಿನಾಯಕ—(ಜನಾಂತಿಕಂ) ಈಕೆಯ ಗುರುವೆಂದರೆ ಯಾರಿರಬಹುದು!

ಕಮಲಾ—ಹೌದು ಗುರುವಿನ ಆಜ್ಞೆ. ಬಾಲ್ಯದಲ್ಲಿ ನನ್ನ ಪ್ರೇಮದ ಖನಿಯಾದ ಗುರುವು ನಿನ್ನೆ ನನಗೆ ಭೆಟ್ಟಿಯಾದಾಗ ನಿಮ್ಮ ಸಂಬಂಧವನ್ನು ಇಡದೆ ಇರಲಿಕ್ಕೆ ಹೇಳಿದರು.

ವಿನಾಯಕ—(ಜನಾಂತಿಕಂ) ನಿನ್ನೆಯಂತೂ ಈಕೆಗೆ ವಸಂತನ ಹೊರತು ಬೇರೆ ಯಾರ ದರ್ಶನವೂ ಆಗಿಲ್ಲ; ಅಥವಾ ನನಗೆ ತಿಳಿಯದಂತೆ ಅವನು ಯಾವಾಗಲಾದರೂ ಬಂದು ಹೋಗುತ್ತಿದ್ದನೋ ಏನೋ! ಹೆಂಗಸರ ನೆಲೆಯು ಯಾರಿಗೂ ತಿಳಿಯದು. ಆದರೂ ಆ ಗುರುವು ಇಂಥ ಘಾತಕನಲ್ಲವೆಂದು ತೋರುತ್ತದೆ.

ವಸಂತ—ಬಾಯಿ, ನಿನ್ನ ಗುರುವು ಯಾರು? ಮತ್ತು ಆತನು ನಿನಗೆ ಭೆಟ್ಟಿಯಾದದ್ದು ಯಾವಾಗ?

ಕಮಲಾ—ಡಾಕ್ಟರ, ನನ್ನ ಗುರುವು ಸಂಪೂರ್ಣವಾಗಿ ನಿಮಗೆ ಪರಿಚಯ ದವನಿರುವದಲ್ಲದೆ, ಆತನು ನನಗೆ ಯಾವಾಗ ಭೆಟ್ಟಿಯಾಗುತ್ತಾನೆಂಬದೂ ನಿಮಗೆ ತಿಳಿಯದೆ ಇಲ್ಲ.

ವಸಂತ—ಇಲ್ಲ. ಅವನ ಗುರುತು ನನಗಿಲ್ಲ.

ಕಮಲಾ—ನಿಶ್ಚಯವಾಗಿ ನಿಮಗೆ ಆತನ ಗುರುತುಂಟು.

ವಸಂತ—(ಸ್ವಗತಂ) ಇವಳು ಗಂಡನನ್ನೇನಾದರೂ 'ಗುರು'ವೆಂದು ಹೇಳುತ್ತಿರಬಹುದೆ? (ಪ್ರಕಾಶಂ) ಕಮಲಾವತೀ, ನನ್ನನ್ನು ಹೀಗೆ ವಿಚಾರಗಳ ಗೊಂದಲದಲ್ಲಿ ಕೆಡವಬೇಡ. ಹೇಳು ನಿನ್ನ ಗುರುವು ಯಾರು? ಮತ್ತು ಅವನು ನನ್ನ ಸಂಬಂಧವನ್ನು ತಪ್ಪಿಸಿಕೊಳ್ಳಲಿಕ್ಕೆ ಹೇಳುವ ಕಾರಣವಾದರೂ ಏನು?

ಕಮಲಾ—ಹೇಳಲೇ ಹಾಗಾದರೆ ಗುರುವಿನ ಹೆಸರನ್ನು—ಆ! ಕೇಳಿರಿ. ನೀವೇ ನನ್ನ ಗುರು. ನಿಮ್ಮ ಸಂಬಂಧವನ್ನು ತಪ್ಪಿಸಿಕೊಳ್ಳಲಿಕ್ಕೆ ಹೇಳಿದ ವರು ನೀವೇ.

ವಿನಾಯಕ—(ಜನಾಂತಿಕಂ) ಇದೇನಿದು ಗೌಡಬಂಗಾಲಿ! ಅಂತೂ ಈಗಿನ ಗುರುಗಳು ಒಳ್ಳೇ ಚನ್ನಾಗಿದ್ದಾರೆ.

ಡಾ. ವಸಂತ—ಇದರಲ್ಲಿ ನನಗೇನೂ ತಿಳಿಯುವದಿಲ್ಲ.

ವಿನಾಯಕ—(ಜನಾಂತಿಕಂ) ಅದಕ್ಕೆಂದೇ ಹೆಣ್ಣುವಾಯಿ, ಗಂಡು ನಾಯಿಯೆಂದು ಹೇಳುವದು.

ಕಮಲಾ—ಡಾಕ್ಟರ, ಬೆದರಬೇಡಿರಿ. ನಾನು ನಿಮ್ಮ ಶಿಷ್ಯಳು, ನಿಮ್ಮ ವಿದ್ಯಾರ್ಥಿನಿಯು, ಬಹಳವೇನು? ನಿಮ್ಮ ಹೊಟ್ಟೆಯ ಮಗಳು. ನನ್ನನ್ನು ನಿರಾ ಕರಿಸಬೇಡಿರಿ. ಇದೊಂದು ಭಿಕ್ಷೆಯನ್ನು ನೀಡಲಿಕ್ಕೆ ಬೇಕು. ದಯಮಾಡಿ ನನ್ನ ಪಾತಿವ್ರತ್ಯಕ್ಕೆ ಭಂಗತರಬೇಡಿರಿ. (ಡಾಕ್ಟರನ ಕಾಲು ಹಿಡಿಯುವಳು.)

ವಸಂತ—ಕಮಲಾಬಾಯಿ, ನೀನು ಮಾತಾಡುವದೇನು?

ಕಮಲಾ—ಡಾಕ್ಟರ, ನನ್ನ ಪರಮಗುರುವೇ, ನನಗೆ ಅಭಯಕೊಡಿರಿ. ನನ್ನ ಮೇಲಿನ ದುಷ್ಟ ಮನಸ್ಸನ್ನು ಕಿತ್ತುಹಾಕಿರಿ. ಇನ್ನು ಮೇಲೆ ನನ್ನ ವಿಷಯ ವಾಗಿ ನಿಮ್ಮ ಮನದಲ್ಲಿ ಪಾಪವಾಸನೆಯನ್ನು ತರಬೇಡಿರಿ.

ವಸಂತ—ಏಳು-ಏಳು, ಕಮಲಾವತೀ, ಇಂಥ ವೇಳೆಯಲ್ಲಿ ಅವಿಚಾರ ಮಾಡಬೇಡ.

ವಿನಾಯಕ—(ಜನಾಂತಿಕಂ) ಪಾತಿವ್ರತ್ಯವನ್ನು ಕಾಯ್ದುಕೊಳ್ಳುವದು

ಅವಿಚಾರವಾದರೆ ವಿಚಾರವೆನ್ನುವದಾದರೂ ಯಾತಕ್ಕೆ? ಈಗಿನ ಜಗತ್ತೇ ಹೀಗಿದೆ. ಸಂಭಾವಿತರಿಗೆ ಶುಂಭರೆಂದೂ, ನರಪಶುವಿಗೆ ವ್ಯವಹಾರ ಚತುರನೆಂದೂ, ಹುಟ್ಟು ಗಳ್ಳರಿಗೆ ಒಳ್ಳೇ ಕುಶಲರೆಂದೂ ಹೇಳುವ ರೂಢಿಯೇ ಬಿದ್ದದೆ.

ಕಮಲಾ—ಇಲ್ಲ, ಇಲ್ಲ. ನೀವು ಅಭಯುವನ್ನು ಕೊಟ್ಟಹೊರತು ನಾನು ಏಳುವದಿಲ್ಲ. ನನ್ನ ವಿಷಯುಕವಾದ ಪ್ರೇಮುವನ್ನು ಬಿಟ್ಟೆವೆಂದು ಹೇಳಿದ ಹೊರತು ಈ ಗುರುವಿನ ಚರಣವನ್ನು ಬಿಡುವದಿಲ್ಲ.

ವಸಂತ—(ಸ್ವಗತಂ) ಈಕೆಗೆ ಅಭಿವಚನ ಕೊಡುವದೆಂದರೆ ನನ್ನ ಸರ್ವ ಆಶೆಗಳ ಮೇಲೂ ನೀರು ಬಿಟ್ಟಂತೆಯೇ ಸರಿ. ಹೀಗೆ ವಚನ ಕೊಡುವದಾದರೆ ನಾನು ಇಷ್ಟೆಲ್ಲ ಪ್ರಯತ್ನವನ್ನೇಕೆ ಮಾಡಬೇಕಾಗಿತ್ತು? (ಪ್ರಕಾಶಂ) ಬಾಯಿ....

ಕಮಲಾ—ಡಾಕ್ಟರ, ಹೆಚ್ಚಿಗೆ ಮಾತಾಡಲಿಕ್ಕೆ ಅವಕಾಶವಿಲ್ಲ. ಬೇಗನೆ ನನಗೆ ಅಭಯುವನ್ನು ಕೊಡಿರಿ. ತಮ್ಮ ಅಭಿವಚನವೆಂದರೆ ನನ್ನ ಸೌಭಾಗ್ಯವರ ದಾನವೇ ಸರಿ. ಹು! ಬೇಗ ಕೊಡಿರಿ.

ವಸಂತ—(ಸ್ವಗತಂ) ಇನ್ನು ಈ ವಿಲಾಸದಲ್ಲಿ ಏನೂ ಸ್ವಾರಸ್ಯವಿಲ್ಲ. ಮೊದಲು ಈಕೆಯು ತಾಯಿಯು ದುರಾಶೆಯಿಂದ ನನ್ನ ಪ್ರೇಮ ಭಂಗವಾಯಿತು. ಈಗ ಈಕೆಯು ಗುರುವಿನ ಉಪದೇಶದಿಂದ ಪ್ರೇಮ ಭಂಗವಾಯಿತು. ಉಪಾಯ ವಿಲ್ಲ. (ಪ್ರಕಾಶಂ) ಕಮಲಾಬಾಯಿ, ಇಗೋ ಹಿಡಿ ವಚನವನ್ನು. ನಾನು ನಿನ್ನ ಅಭಿಲಾಷೆಯನ್ನು ಸಂಪೂರ್ಣವಾಗಿ ಬಿಟ್ಟೆನು. ಚಿರಕಾಲ ಸುಖದಿಂದಿರು. ನಿನ್ನ ಮಾರ್ಗದಲ್ಲಿ ನಾನೆಂದೂ ಅಡ್ಡಬರುವದಿಲ್ಲ.

ಕಮಲಾ—ಆಃ! ಪರಮೇಶ್ವರಾ! ನೀನಲ್ಲವೇ ದೀನದಯಾಲುವು!

ವಿನಾಯಕ:—(ಜನಾಂತಿಕಂ) ಇನ್ನು ಏನೇನು ನಡೆಯುವದೋ ನೋಡೋಣ.

ಕಮಲಾ:—ಡಾಕ್ಟರ, ಹಾಗಾದರೆ ನಾನು ಬರುತ್ತೇನೆ.(ಎಂದು ಹೋಗ ಹತ್ತುವಳು.)

ವಿನಾಯಕ:—(ಜನಾಂತಿಕಂ)ಹಾಗಾದರೆ ನಾವಿಲ್ಲೇ ದವಾಖಾನೆಯ ಸೆರೆ ಮನೆಯಲ್ಲಿ ಬೀಳಬೇಕಾಯಿತು. ಹೊರಗೆ ಹೋಗುವದು ಹೇಗೆ?

ವಸಂತ:—ಆದರೆ ಕಮಲಾವತೀ, ನಿನ್ನಲ್ಲಿ ನನ್ನದೊಂದು ವಿನಂತಿಯುಂಟು.

ವಿನಾಯಕ:—(ಜನಾಂತಿಕಂ)ಮತ್ತೆಸುರುವಾಯಿತು ಹೊಸ ಅಂಕು.

ಕಮಲಾ:—ಏನಿದ್ದರೂ ಹೇಳಬಹುದು. ಎಳ್ಳಷ್ಟು ಸಂಶಯುವೂ ಬೇಡ.

ವಸಂತ:—ನಾನು ನಿಮ್ಮ ಗುರುವು ಹೇಗೆ? ನಿಮಗೆ ಉಪದೇಶ ಮಾಡಿದುದಾವಾಗ? ನನ್ನ ಕಾಲನ್ನೇಕೆ ಬಿದ್ದಿರಿ?

ಕಮಲಾ:—ವಸಂತರಾವ, ಇದರಲ್ಲಿ ತಿಳಿಯದ ಮಾತೇನೂ ಇಲ್ಲ. ನೀವು ಮೃಚ್ಛಕಟಿಕ ನಾಟಕಕ್ಕೆ ನನ್ನನ್ನು ಕರಕೊಂಡು ಹೋಗಿ ನನ್ನ ಮೇಲೆ ಬಹಳ ಉಪಕಾರ ಮಾಡಿದಿರಿ.

ವಸಂತ:—ಸುಳ್ಳು, ಸಂಪೂರ್ಣ ಸುಳ್ಳು. ನಿನ್ನನ್ನು ಮತ್ತಿಷ್ಟು ಮೋಹ ಜಾಲದಲ್ಲಿ ಕೆಡವುವದಕ್ಕಾಗಿಯೇ ಆ ನಾಟಕಕ್ಕೆ ಕರೆದುಕೊಂಡು ಹೋಗಿದ್ದೆನು.

ಕಮಲಾ:—ಅದೆಲ್ಲ ನಿಜ; ಆದರೆ ನನ್ನ ಮೇಲೆ ಅದರ ವಿರುದ್ಧ ಪರಿಣಾಮವಾಯಿತು. ಡಾಕ್ಟರ, ಮಹಾಕವಿಯ ಸಾಮರ್ಥ್ಯವು ನಿಮಗೆ ಗೊತ್ತಿಲ್ಲ. ನಾವು ಹೊಲಸು ಹೇಸಿ ಆನಂದವನ್ನು ಪಡೆಯುವದಕ್ಕಾಗಿ ಅಲ್ಲಿಗೆ ಹೋಗುತ್ತೇವೆ; ಆದರೆ ಆ ಜಾದೂಗಾರರು ನಮ್ಮ ಮನಸ್ಸನ್ನು ಪವಿತ್ರ ಮಾಡಿ ಬಿಡುತ್ತಾರೆ.

ವಸಂತ:—ಮಹಾಕವಿಯ ಈ ಸಾಮರ್ಥ್ಯವು ನನಗೆ ಗೊತ್ತಿದ್ದಿಲ್ಲ.

ವಿನಾಯಕರಾವ:—(ಜನಾಂತಿಕಂ) ಗೊತ್ತಿದ್ದರೆ ಇವರು ನಾಟಕಕ್ಕೆ ಹೋಗುತ್ತಲೇ ಇದ್ದಿಲ್ಲ.

ಕಮಲಾ:—ಡಾಕ್ಟರ ನಾವು ಪಾಪಿಷ್ಠ ಜನರು; ಆದರೆ ಪರಮೇಶ್ವರನು ಯಾವಾಗಲೂ ಒಂದಿಲ್ಲೊಂದು ಮುಖದಿಂದ ಉದ್ಧರಿಸುವದಕ್ಕೆ ಪ್ರಯತ್ನಿಸುತ್ತಿರುತ್ತಾನೆ. ಮಹಾಕವಿಯ ಕಾವ್ಯವೂ ಇಂಥ ಸಾಮರ್ಥ್ಯಗಳಲ್ಲೊಂದು ಅವರು ನಮ್ಮ ಮನಸ್ಸಿಗೆ ಮಲಿನ ಮೋಹವನ್ನು ತೋರಿಸಿ ತಮ್ಮ ಕಡೆಗೆ ಜಗ್ಗಿಕೊಂಡು ಅದನ್ನು ಸ್ವಚ್ಛ ಮಾಡಿಬಿಡುತ್ತಾರೆ. ಮಹಾಕವಿ ಕಾವ್ಯವೂ ಮಾತೆಯ ಹಸ್ತವೂ ಎರಡೂ ಒಂದೇ. ಅವೆರಡೂ ಪ್ರೇಮಳವಾಗಿರುವವಲ್ಲದೆ ಅತಿಸೂಕ್ಷ್ಮ ರೀತಿಯಿಂದ ಮನಸ್ಸಿನ ಮಾಲಿನ್ಯವನ್ನು ಕಳೆಯುತ್ತವೆ.

ವಸಂತ:—ಕಮಲಾವತೀ, ನಾಟಕವನ್ನು ಈ ರೀತಿಯಿಂದ ನೋಡಲಿಕ್ಕೆ ನಿನಗೆ ಯಾರು ಕಲಿಸಿದರು?

ಕಮಲಾ:—ನೀವು ಕಲಿಸಿದಿರಿ. ವಸಂತಸೇನೆಯು ರಂಗಭೂಮಿಯ ಮೇಲೆ ಬಂದಕೂಡಲೆ ಈ ನಾಟಕವು ನನ್ನನ್ನೇ ಉದ್ದೇಶಿಸಿ ಬರೆದಿರಬಹುದೆಂದು ನನಗೆ ಅನ್ನಿಸಹತ್ತಿತು.

ವಸಂತ:—ಇದು ನಿಜವಲ್ಲವೆ? ಹಾಗೇಕೆ ನಿಮಗೆ ತಿಳಿಯಿತು?

ಕಮಲಾ:—ನನ್ನ ಮನಸ್ಸು ಹೇಗೆ ಇಬ್ಬಗೆಯಾಗಿತ್ತೋ ಹಾಗೆಯೇ

ವಸಂತಸೇನೆಯ ಚಿತ್ರವೂ ಇಬ್ಭಾಗವಾಯಿತು. ನನಗೆ ಒಂದು ಕಡೆಗೆ ನನ್ನ ಪ್ರಾಣ ಪ್ರಿಯನು, ಇನ್ನೊಂದು ಕಡೆಗೆ ನೀವು ಇದ್ದಂತೆ ವಸಂತಸೇನೆಗೆ ಒಂದು ಕಡೆಗೆ ಚಾರುದತ್ತ, ಮತ್ತೊಂದು ಕಡೆಗೆ ಶಕಾರ ಹೀಗೆ ಇಬ್ಬರು.

ವಸಂತ:—ಕಮಲಾವತೀ, ಅವರಿಬ್ಬರಲ್ಲಿ ನಾನು ಯಾರು?

ವಿನಾಯಕ:—(ಜನಾಂತಿಕಂ) ಮೂರ್ಖತನವೆನಬೇಕು ಇದಕ್ಕೇ.

ಕಮಲಾ:—ಡಾಕ್ಟರ ಅದನ್ನು, ಹೇಳಲಿಕ್ಕೇ ಬೇಕೇನು? ನೀವು ಶಕಾರ! ನೀವು ಸುಶಿಕ್ಷತರಾಗಿದ್ದು, ಪರಸ್ತ್ರೀಯರ ಮೇಲೆ ಮನಸ್ಸು ಮಾಡುವ ನೀವು ಬೇರೆ ಯಾರು? ಯಾರೂ ಅಲ್ಲ ಶಕಾರ! ಶಕಾರ!! ಶಕಾರ!!!

ವಿನಾಯಕ:-(ಜನಾಂತಿಕಂ) ಕೈತೋರಿಸಿ ಅವಲಕ್ಷಣವೆನ್ನಿಸಿಕೊಂಡರಂತೆ.

ವಸಂತ:—ಕಮಲಾವತೀ, ನನಗೆ ಬಹು ತಿರಸ್ಕಾರದ ಮಾತುಗಳನ್ನಾಡುತ್ತಿರುವೆ.

ಕಮಲಾ—ವಸಂತರಾವ, ಸ್ಪಷ್ಟವಾಗಿ ಮಾತಾಡುವಬಗ್ಗೆ ಕ್ಷಮೆಯಿರಲಿ. ನಿಮ್ಮಂಥ ಸುಶಿಕ್ಷಿತರಿಗೆ ಇದಕ್ಕೂ ಹೆಚ್ಚಿನ ತಿರಸ್ಕಾರದರ್ಶಕಶಬ್ದಗಳನ್ನು ಪಯೋಗಿಸಲಿಕ್ಕೆ ಬೇಕು ಬಿ. ಎ. ಎಮ್. ಎ. ಎಮ್. ಬಿ. ಬಿ. ಎಸ್. ಪರೀಕ್ಷೆ ಪಾಸಾಗಿ ಯಾರು ನಾಯಿಯಂತೆ ಪರಸ್ತ್ರೀಯರ ಬೆನ್ನುಹತ್ತಿ ತಿರುಗುವರೋ, ಅವರಂಥ ನಾಚಿಕೆಗೇಡಿಗಳೆಂದರೆ ಅವರೇ. ಇತರ ಜನರಿಗೆ ಶಿಕ್ಷಣವಿರುವದಿಲ್ಲ. ಒಂದುವೇಳೆ ಇಂಥವರಿಂದ ಮರ್ಕಟಲೀಲೆಯು ಘಟಿಸಿತೆಂದರೆ ಅವರ ಅಜ್ಞಾನಕ್ಕೆ ದೋಷಕೊಡಲಿಕ್ಕೆ ಒರುವದಿಲ್ಲ; ಆದರೆ ನೀವು ವಿದ್ವಾಂಸರು, ನೀವು ಯಾವಾಗ ಪರಸ್ತ್ರೀಯರ ಮನಸ್ಸನ್ನು ಒಲಿಸಿ ಅವರ ಪಾತಿವ್ರತ್ಯವನ್ನು ಹಾಳು ಮಾಡಲಿಕ್ಕೆ ಯತ್ನಿಸುತ್ತಿರುವಿರೋ ಆಗ ನೀವು ನಿಮ್ಮ ಶಿಕ್ಷಣಕ್ಕೆ ಎಷ್ಟು ಕಲಂಕವನ್ನು ಹಚ್ಚುವಿರೆಂಬ ಕಲ್ಪನೆಯು ಬರುವದೇನ ? ಡಾಕ್ಟರ, ಸ್ತ್ರೀಸಮಾಜವನ್ನು ಕೆಡಿಸಿ ಹಾಳುಮಾಡುವ ಮಹಾಮಾರೀ ಬೇನೆಯೆಂದರೆ ನೀವು-ನೀವು ಕಾಮಾಂಧ ವಿದ್ವಾನರು. ನೀವು ಸುಶಿಕ್ಷಿತರೆಂದು ತಿಳಿದು, ಜನರು ನಂಬಿ ನಿಮ್ಮನ್ನು ಮನೆಯಲ್ಲಿ ಬರಗೊಡುತ್ತಾರೆ; ಆದರೆ ನೀಚರಾದ ನೀವು ಅವರ ಮನೆಯ ಹೆಂಗಸರ ಮೇಲೆ ಕಣ್ಣಿಡುತ್ತೀರಿ. ಡಾಕ್ಟರ, ನಿಜವನ್ನು ಮಾತಾಡಿದ ಬಗ್ಗೆ ಸಿಟ್ಟಾಗಬೇಡಿರಿ. ಈಗ ಸ್ತ್ರೀ ವರ್ಗವು ಕೆಟ್ಟು ಹಾಳಾಗುತ್ತಿರುವದಕ್ಕೆ ನಿಮ್ಮಂಥ ಸುಶಿಕ್ಷಿತರೇ ಕಾರಣರು. ಇಂಥವರನ್ನು ನೀರಿಲ್ಲದಲ್ಲಿ ಒಯ್ದು ತಲೆಹೊಡೆಯಬೇಕು.

ವಿನಾಯಕ—(ಜನಾಂತಿಕಂ)ನೋಡಿರಿ. ತನ್ನ ಒಂದೊಂದು ಪಾಪದ ಕೆಲಸವು ನೆನಪಾಗಿ ಹೇಗೆ ನಿಂತಿರುವನು? ಊರ ಮುಂದಿನ ಬೋರಗಲ್ಲಿನಂತೆ.

ವಸಂತ—ಬೇಡ-ಬೇಡ.

ಕಮಲಾ—ಹಾಗಿದ್ದರೆ ಸುಶಿಕ್ಷಿತರಿಗೆ ಹೆಸರಿಡಬಾರದೆಂದು ಹೇಳುವದೇಕೆ? ಆ ಶಕಾರನು ತನ್ನ ಧನಸಂಪತ್ತಿನಿಂದ ಉನ್ಮತ್ತನಾಗಿ ಹೋಗಿದ್ದನು. ನೀವು ನಿಮ್ಮ ವಿದ್ಯಾಮದದಿಂದ ಮತ್ತರಾಗಿರುತ್ತೀರಿ! ಆದರೆ ಇಬ್ಬರೂ ಪಶುಗಳೇ! ಶಕಾರನಿಗೆ ತನ್ನ ಧನಮದದಿಂದ, ಪ್ರತಿ ಒಬ್ಬ ಹೆಂಗಸು ಬಂದು ತನ್ನನ್ನು ಕೈ ಹಿಡಿಯುದೇಕೆಂದು ಇಚ್ಛೆಯಾಗುತ್ತಿತ್ತು. ಸುಶಿಕ್ಷಿತರ ಮನಸ್ಸು ಹೀಗೆಯೇ ಕಲುಷಿತವಾಗಿರುತ್ತದೆ. ಪ್ರತ್ಯೇಕ ಸುಂದರ ಸ್ತ್ರೀಯು ತಾನಾಗಿ ಬಂದು ನಿಮ್ಮನ್ನು ಆಲಿಂಗಿಸಬೇಕೆಂದು ನಿಮಗೆ ಅನಿಸುತ್ತದೆ. ಡಾಕ್ಟರ, ಮದನನು ಒಂದೇಸವನೆ ಬಾಣವರ್ಷಣ ಮಾಡುತ್ತಿದ್ದರೂ ವಸಂತಸೇನೆಯು ಕೊನೆಯ ವರೆಗೂ ನನ್ನ ದರಿದ್ರ ಚಾರುದತ್ತನೇ ನನಗೆ ಪ್ರಿಯನೆಂದು ಹೇಳಿದಳು. ಆಗ ನನ್ನ ಕಣ್ಣು ತೆರೆದವು. ವಸಂತಸೇನೆಯು ಹೇಳಿಕೇಳಿ ವೇಶ್ಯಾ. ದಿನಾಲು ಒಬ್ಬೊಬ್ಬರ ಮೇಲೆ, ಅಷ್ಟೇಕೆ ಒಂದೇ ದಿವಸ ಎಷ್ಟೋ ಪುರುಷರ ಮೇಲೆ ಪ್ರೇಮ ಮಾಡುವ ಅಧಿಕಾರವು ಅವಳಿಗುಂಟು ಅಂಥವಳು ಸಹ ತನ್ನ ಪ್ರೇಮವನ್ನು ನೆನಿಸಿ ಒಬ್ಬನೇ ಒಬ್ಬ ಪುರುಷನನ್ನು ಪ್ರೀತಿಸಹತ್ತಿದಳೆಂದ ಮೇಲೆ, ಆಗ ನಾನು ನನ್ನ ಮನಸ್ಸಿಗೆ ಪ್ರಶ್ನೆ ಮಾಡಿದೆನು—ವೇಶ್ಯೆಯು ಯಾರು? ಚಾರುದತ್ತನು ದರಿದ್ರನಾಗಿದ್ದರೂ ಅವನನ್ನೇ ನಂಬಿಕೊಂಡಿರುವ ವಸಂತಸೇನೆಯು ವೇಶ್ಯೆಯೋ? ಅಥವಾ ಮನೆ ಯಲ್ಲಿ ಪತಿಯನ್ನು ಬಿಟ್ಟು ಪರಪುರುಷನೊಡನೆ ವಿಲಾಸಮಾಡುತ್ತಾ ನಾಟಕ ವನ್ನು ನೋಡಲಿಕ್ಕೆ ಬಂದ ನಾನು ವೇಶ್ಯೆಯೋ? ಡಾಕ್ಟರ, ಈಗ ನನ್ನ ಪ್ರಾಣೇ ಶ್ವರನ ನೆನಪು ನನಗಾಯಿತು ಆ ಭವ್ಯಮೂರ್ತಿಯು ನನ್ನ ಕಣ್ಣೆದುರಿಗೆ ನಿಂತು ಇದೇ ಪ್ರಶ್ನೆಯನ್ನು ಮಾಡಹತ್ತಿತು. ನನ್ನ ಮೇಲೆ ವಿಶ್ವಾಸಪಟ್ಟು ಆಫೀಸಿಗೆ ಹೋದ ನನ್ನ ಹೃದಯರಮಣನ ಸ್ಮರಣೆಯಾಯಿತು. ನನ್ನ ದರಿದ್ರ ಚಾರು ದತ್ತನು ನನ್ನೆದುರಿಗೆ ಅದೃಶ್ಯರೂಪದಿಂದ ನಿಲ್ಲಹತ್ತಿದನು. ನನ್ನ ಚಾರುದತ್ತನಲ್ಲಿ ಧನಕನಕ ಸಂಪತ್ತು ಇರಬಹುದು; ಆದರೆ ತರುಣ ಸ್ತ್ರೀಯರನ್ನು ಮೋಹಗೊಳಿ ಸುವ ತಾರುಣ್ಯವಾಗಲಿ, ರೂಪಸಂಪತ್ತಿಯಾಗಲಿ ಇಲ್ಲ. ಇದು ನಿಜ. ಆತನು ಹೀಗೆ ನಿರ್ಧನನೆಂದ ಮಾತ್ರಕ್ಕೆ ನಾನು ಆತನನ್ನು ಹೇಗೆ ಬಿಡಲಿ? ವಸಂತಸೇನೆ ಯು ವೇಶ್ಯೆಯಾಗಿದ್ದರೂ ತನ್ನ ಚಾರುದತ್ತನನ್ನು ಬಿಡಲಿಲ್ಲ; ನಾನು ಸಂಭಾವಿತ

ಮತ್ತು ಉಚ್ಚಕುಲದಲ್ಲಿ ಜನ್ಮವೆತ್ತಿದ ನಾನು-ನಾನು-ನನ್ನ ಚಾರುದತ್ತನನ್ನು ಹೇಗೆ ತ್ಯಜಿಸಲಿ? ಇಲ್ಲ-ಇಲ್ಲ. ನನ್ನ ಪತಿಯನ್ನು ನಾನೆಂದೂ ಬಿಡಲಿಕ್ಕಿಲ್ಲವೆಂದು ಮನಸ್ಸಿನಲ್ಲಿ ನಿರ್ಧರಿಸಿದೆನು. ವಸಂತರಾವ, ಆಗ ನೀವೆಂದರೆ ವಿಷವಾಯುವನ್ನು ಫೂತ್ಕರಿಸುವ ಸರ್ಪಕ್ಕಿಂತಲೂ ನನಗೆ ಭಯಂಕರವಾಗಿ ತೋರಹತ್ತಿದಿರಿ. ಶಕಾರ ವಿಷಯಕವಾದ ವಸಂತಸೇನೆಯು ಎಲ್ಲ ತಿರಸ್ಕಾರಗಳೂ ನೆನಪಾದವು. ಅಲ್ಲಿಂದಲ್ಲೇ ನಿಮ್ಮನ್ನು ಕೆಳಗೆ ದೂಡಬೇಕೆಂದು ಮನಸ್ಸಾಯಿತು. ನಿಮ್ಮ ಕಡೆಗೆ ನೋಡುವದಕ್ಕೆ ಸಹ ತಿರಸ್ಕಾರವುಂಟಾಗಿ ಒಂದೇಸವನೆ ನಾಟಕವನ್ನು ನೋಡಹತ್ತಿದೆನು.

ವಿನಾಯಕ—(ಜನಾಂತಿಕಂ) ಆಃ! ಎಷ್ಟು ಉದಾತ್ತವಿಚಾರವಿದು! ನಾಟಕದಲ್ಲಿ ವೇಶ್ಯೆಯ ಶೃಂಗಾರ ಚೇಷ್ಟೆಗಳನ್ನು ನೋಡಿ ಬಲೆಬೀಳುವ ಸ್ತ್ರೀಯರು ಇಂಥ ನೀತಿಯನ್ನು ಕಲಿತರೆ ಎಷ್ಟು ಹಿತವಾಗುವದು? ನನ್ನ ಪತ್ನಿಯ ಮೇಲೆ ನಾನು ವ್ಯರ್ಥವಾಗಿ ದುರಾರೋಪ ಮಾಡಿದೆನಲ್ಲವೇ? ಹೀಗಿದ್ದ ಮೇಲೆ ಈಗಿಂದೀಗಲೇ ನಾನು ಆತ್ಮಹತ್ಯವನ್ನೇಕೆ ಮಾಡಿಕೊಳ್ಳಬಾರದು? ಬೇಡ. ಇನ್ನೂ ಏನೇನಾಗುವದೋ ನೋಡೋಣ.

ವಸಂತ—(ಸ್ವಗತಂ) ನಿಜ. ಈಕೆಯು ಆಗ ನನ್ನನ್ನು ಕಣ್ಣೆತ್ತಿ ಸಹ ನೋಡುವದನ್ನು ಬಿಟ್ಟು ನಾಟಕದಲ್ಲಿ ತಲ್ಲೀನಳಾದದ್ದು ನಿಜ; ಆದರೆ ನೀಚನಾದ ನಾನು ಅದರ ಕಲ್ಪನೆಯನ್ನು ಬೇರೆಯಾಗಿ ಮಾಡಿಕೊಂಡೆನು.

ಕಮಲಾವತಿ:—ಡಾಕ್ಟರ, ನಮ್ಮ ಸ್ತ್ರೀಯರ ಜನ್ಮವೆಂದರೆ ಬಹಳ ವ್ಯರ್ಥವಾದದ್ದು. ಲಗ್ನದ ವೇಳೆಯಲ್ಲಿ ನಮ್ಮ ಅಭಿಪ್ರಾಯವನ್ನು ಯಾರೂ ಕೇಳುವದಿಲ್ಲ. ಗಂಡನು ಕುರುಡನೋ, ಕುಂಟನೋ, ಕಿವುಡನೋ, ಹುಚ್ಚನೋ, ಮುದುಕನೋ, ವಿಧುರನೋ ಇದನ್ನು ಸಹ ನಮಗೆ ತಿಳಿಸುವದಿಲ್ಲ. ತಮ್ಮ ಮನಸ್ಸಿಗೆ ಬಂದಂತೆ ವರನನ್ನು ನಿಶ್ಚಯಿಸಿ ಲಗ್ನವೇಳೆಯಲ್ಲಿ ನಮ್ಮನ್ನು ವಧಸ್ಥಾನಕ್ಕೆಳೆಯುವಂತೆ ಒಯ್ದು ನಿಲ್ಲಿಸುತ್ತಾರೆ; ಆದರೆ ಮುಂದೆ ನಮ್ಮ ಮೇಲೆ ಎಷ್ಟು ಭಾರವು ಬೀಳುವದೆಂಬ ಕಲ್ಪನೆಯನ್ನು ಇವರು ಮಾಡುವದೇ ಇಲ್ಲ. ನಾವು ಯಾವನ ಹೆಸರಿನಿಂದ ದಂಡೆಯನ್ನು ಹಾಕಿಕೊಳ್ಳುವೆವೋ ಅವನ ಮೇಲೆ ಸುಮ್ಮನೆ ಪ್ರೇಮ ಮಾಡಬೇಕಾಗುತ್ತದೆ; ಆದರೆ ಆ ಪ್ರೇಮ ಭಂಡಾರವನ್ನು ಕಳವು ಮಾಡಲಿಕ್ಕೆ ನಡುವೇ ನಿಮ್ಮಂಥ ಸುಶಿಕ್ಷಿತ ದರವಡೆಖೋರರು ನಮ್ಮ ಪುಣ್ಯ-ಪಾತಿವ್ರತ್ಯಗಳನ್ನು ನೆಲಸಮ ಮಾಡಲಿಕ್ಕೆ ಹೊಂಚುಹಾಕಿಕೊಂಡೇ ಕುಳಿತಿರುತ್ತೀರಿ. ಮೊದಲೇ ನಮ್ಮ ಮನಸ್ಸು ಚಂಚಲವಾದದ್ದು! ಅದರಲ್ಲಿಯೂ ಪತಿಗೃಹಕ್ಕೆ ಹೋಗುವಾಗ

ನಮ್ಮ ವಯಸ್ಸು ೧೪-೧೫ಕ್ಕಿಂತ ಹೆಚ್ಚಿಗಿರುವದಿಲ್ಲ. ಎಂದ ಮೇಲೆ ಸಾರಾಸಾರ ವಿಚಾರವೆಲ್ಲಿಂದ ಬರಬೇಕು? ನಿಮ್ಮಂಥ ನೀಚರ ಮೋಹಕ ಮಾತಿಗೆ ಮರುಳಾಗಿ ನಮ್ಮ ಪಾತಿವ್ರತ್ಯವು ಹಾಳಾದರೆ ಅದರಲ್ಲಿ ದೋಷವು ಯಾರದು?

ವಿನಾಯಕ:—(ಜನಾಂತಿಕಂ) ಎಂಥ ವಿಲಕ್ಷಣ ಪ್ರಶ್ನೆಯಿದು? ದಿಲ್ಲೀ ದರಬಾರದಷ್ಟು ದೊಡ್ಡದಾದ ಈ ಪ್ರಶ್ನೆಚಿಹ್ನದ ಮುಂದೆ ಉತ್ತರವೇನು?

ಕಮಲಾ:—ಡಾಕ್ಟರ, ಮಕ್ಕಳಮದುವೆ ಮಾಡುವಾಗ ತಾಯಿ-ತಂದೆಗಳು ಸಂಪೂರ್ಣವಿಚಾರ ಮಾಡಬೇಕು; ಅದರಲ್ಲಿಯೂ ವಿಧುರರಿಗೆ ಹೆಣ್ಣು ಕೊಡುವಾಗಲಂತೂ ಬಹಳ ಎಚ್ಚರಿಕೆಬೇಕು; ಆ ಮುದುಕರಾದರೂ ಲಗ್ನ ಮಾಡಿಕೊಳ್ಳುವಾಗ ತಿಳಿದು ನೋಡಬೇಕು! ಸುಮ್ಮನೆ ಎರಡನೆಯವರ ಮಗಳು ಸಿಗುವಳೆಂಬ ಭ್ರಮೆಯಿಂದ ವಿವಾಹಕ್ಕೆ ಸಿದ್ಧವಾಗಿ ಉಪಯೋಗವಿಲ್ಲ. ತರುಣಿಯೊಡನೆ ಲಗ್ನವಾದ ಮೇಲೆ 'ಧರ್ಮೇ ಚಾರ್ಥೇಚ ಕಾಮೇಚ ನಾತಿಚರಾಮಿ' ಎಂಬ ವಾಕ್ಯವನ್ನು ಪಾಲಿಸುವದಕ್ಕೆ ಶಕ್ತಿಯಿರುವದೋ ಇಲ್ಲವೋ ಎಂಬದನ್ನು ಸಂಪೂರ್ಣ ವಿಚಾರಮಾಡಬೇಕು. ಈ ಮುದುಕರಿಗೆ ಏನೆನ್ನಬೇಕು? ತಮಗೆ ಮುಪ್ಪಿನ ವಯಸ್ಸಿನಲ್ಲಿ ಹೆಂಡತಿಯೊಂದಾದರೆ ಸಾಕು; ಮುಂದೆ ಆಕೆಯು ಏನಾದರೇನು? ಏನು ಮಾಡಿದರೇನು? ತಮ್ಮ ಸುಖವನ್ನಷ್ಟೇ ನೋಡಿಕೊಳ್ಳುವರು. ಇಂಥವರ ಹೆಂಡಿರು ಪತಿವ್ರತೆಯರಾಗಿ ಬಾಳಿದರೆ, ಅದು ಆ ಸ್ತ್ರೀಯರ ಸದ್ಗುಣವಲ್ಲದೆ ಈ ಮುದುಕರ ಶಕ್ತಿಯೇನೂ ಅಲ್ಲ; ಆದರೆ ಅವರು ಪಾತಿವ್ರತ್ಯವನ್ನು ಕೆಡಿಸಿಕೊಂಡರೆ ಮಾತ್ರ ಅದರ ದೋಷವೆಲ್ಲ ಈ ಮುದುಕರ ತಲೆಯ ಮೇಲೆಯೇ! ಯಾಕಂದರೆ ಮುಪ್ಪಿನ ವಯಸ್ಸಿನಲ್ಲಿ ಮದುವೆ ಮಾಡಿಕೊಳ್ಳುವದೆಂದರೆ, ತನ್ನ ಪತ್ನಿಗೆ ವ್ಯಭಿಚಾರ ಮಾಡಲಿಕ್ಕೆ ಬಹಿರಂಗವಾಗಿ ಲಾಯ್‌ಸೆನ್ಸ ಕೊಟ್ಟಂತೆಯೇ ಸರಿ!

ವಿನಾಯಕ:—(ಜನಾಂತಿಕಂ) ನಿಜ, ಅಕ್ಷರಶಃ ನಿಜವಾಗಿದೆ. ಇಂಥ ನಿರ್ಮಲ ಮನಸ್ಸಿನ ಈಕೆಗೆ ಅನುರೂಪ ವಯಸ್ಸಿನ ಪತಿಯು ಸಿಕ್ಕಿದ್ದರೆ ಎಷ್ಟು ಚೆನ್ನಾಗಿ ಬಾಳ್ವೆ ಮಾಡಬಹುದಾಗಿತ್ತು? ಈಕೆಯ ಸುಖವನ್ನು ಮಣ್ಣುಗೂಡಿಸಿದ ಚಂಡಾಲನೇ ನಾನು!

ಕಮಲಾ:—ಡಾಕ್ಟರ, ನಿಮ್ಮ ಸಹವಾಸದಿಂದ ನನ್ನ ವರ್ತನವು ಕೆಟ್ಟು ಇನ್ನು ಸ್ವಲ್ಪ ವೇಳೆಯಲ್ಲಿ ಎಲ್ಲವೂ ಹಾಳಾಗಿ ಹೋಗುತ್ತಿತ್ತು; ಆದರೆ ಅದು ಸಹ ನಿಮ್ಮಿಂದಲೇ ದೂರವಾಯಿತು. ನೀವು ನನ್ನ ಶೀಲವನ್ನು ಕೆಡಿಸಲಿಕ್ಕೆ ಯತ್ನಿಸಿ ಸಚ್ಛೀಲದ ಖನಿಯಾದ ವಸಂತಸೇನೆಯನ್ನು ತೋರಿಸಿದಿರಿ. ಮತ್ತು ಅಧಃಪಾತ

ಮಾಡಲಿಕ್ಕೆ ಬಯಿಸಿ ಉದ್ಧಾರದ ಮಾರ್ಗವನ್ನು ತಿಳಿಸಿದಿರಿ. ಇನ್ನು ನಾನು ಆ ಸನ್ಮಾರ್ಗದಿಂದ ಹೇಗೆ ತಿರುಗಲಿ? ಡಾಕ್ಟರ, ಬಿಡಿರಿ ಇನ್ನು ನನಗೆ ಮಾರ್ಗವನ್ನು-ನಾನು ಹೋಗುತ್ತೇನೆ. ಈಗಿಂದೀಗಲೇ ನನ್ನ ಪತಿಯು ಕಡೆಗೆ ಹೋಗಿ ನನ್ನ ಅಪ ರಾಧದ ಕ್ಷಮೆಯನ್ನು ಕೇಳಿಕೊಳ್ಳುತ್ತೇನೆ. ಒದ್ದರೆ ಒದಿಸಿಕೊಳ್ಳುತ್ತೇನೆ, ಬೈದರೆ ಬೈಸಿಕೊಳ್ಳುತ್ತೇನೆ. ನನ್ನ ಮೇಲೆ ಸರ್ವಾಧಿಪತಿ ಸಮ್ರಾಟನೆಂದರೆ ನನ್ನ ಆ ದರಿದ್ರ ಚಾರುದತ್ತನೇ, ನನ್ನ ಪ್ರೇಮದ ಅಧಿಕಾರಿಯೆಂದರೆ ಆ ನನ್ನ ಪ್ರಾಣೇಶ್ವರನೇ!

ವಸಂತ:—ಕಮಲಾವತೀ, ಕೊನೆಗೆ ಇದೊಂದು ಪ್ರಶ್ನೆಗೆ ಉತ್ತರವನ್ನು ಹೇಳು.

ಕಮಲಾ:—ಏನದು ಕೇಳಿರಿ, ಬೇಕಾದಂತೆ ಕೇಳಿರಿ.

ವಸಂತ:—ನೀವು ನಿಮ್ಮ ಪತಿಯನ್ನು ಚಾರುದತ್ತನೆಂದು ನಂಬಿಹೋ-ದರೂ ತಾರುಣ್ಯದಲ್ಲಿ ಸಿಗತಕ್ಕ ಸುಖವನ್ನು ಆತನೆಂದಿಗೂ ಕೊಡಲಾರನು. ದಿನ ದಿನಕ್ಕೆ ನಿಮ್ಮ ದುಃಖವು ಬೆಳೆಯುವದಲ್ಲದೆ ನಿಮ್ಮ ಅಂತ್ಯವು ಸಹ ದುಃಖದಲ್ಲಿಯೇ ಆಗುವದು.

ಕಮಲಾ—ಇನ್ನೆಲ್ಲಿಯ ದುಃಖ ರಾಯರೇ! ಇನ್ನು ದುಃಖದ ಹೆಸರೇ ಬೇಡ. ಸದ್ಗುಣ ಮತ್ತು ಸುಚಟವು ಒಮ್ಮೆ ಹತ್ತಿತೆಂದರೆ ಆ ಮೇಲೆ ದುಃಖದ ಗಾಳಿಯೇ ಇಲ್ಲ. ಡಾಕ್ಟರ, ನಾವು ಕಡೆಯ ವರೆಗೂ ನಾಟಕವನ್ನು ನೋಡ ಲಿಲ್ಲ; ಆದರೂ ಚಾರುದತ್ತನ ಮೇಲೆ ಮಾಡಿದ ನಿರ್ಮಲಪ್ರೇಮಕ್ಕಾಗಿ ಶಕಾರನು ವಸಂತಸೇನೆಯ ಪ್ರಾಣತಕ್ಕೊಳ್ಳುವಾಗಲಾದರೂ ಆಕೆಯು ಅದೇ ನಿಶ್ಚಲಪ್ರೇಮ ದಿಂದ ಮರಣಕ್ಕೆ ಸಹ ಅತ್ಯಾನಂದದಿಂದ ಸಿದ್ಧಳಾದಳಲ್ಲವೇ? ಇದೇ ನಾಟಕದ ಕೊನೆಯಿರಬಹುದು.

ವಸಂತ—ಅಹುದು ಹೀಗೆಯೇ ಅದರ ರಚನೆಯಿದೆ.

ಕಮಲಾ—ಹಾಗಿದ್ದರೆ ಡಾಕ್ಟರ, ಎಲ್ಲಿ ಮರಣಕ್ಕೆಸಹ ಆನಂದಸ್ವರೂಪವು ಬರುವದೋ ಅಂಥ ಸದ್ಗುಣಗಳ ಪರ್ವತವನ್ನು ದುಃಖದ ಬಿರುಗಾಳಿಯು ಸಹ ಹೇಗೆ ಅಲ್ಲಾಡಿಸುವದು? ಚಾರುದತ್ತನು ತರುಣನಿದ್ದನೆಂದು ನೀವು ಹೇಳಬಹುದು; ಆದರೆ ಮಹಾನಂದೆಯು ಅಂಗೀಕರಿಸದ ಪುರುಷನು ನನ್ನ ಪ್ರಾಣೇಶ್ವರನಿಗಿಂತಲೂ ಮುದುಕನೂ, ರೋಗಿಯೂ ಇರಲಿಲ್ಲವೇ? ವಸಂತಸೇನೆಯು ಚಾರುದತ್ತನಿಗಾಗಿ ಎಷ್ಟು ಆನಂದದಿಂದ ಮರಣಕ್ಕೆ ಸಿದ್ಧಳಾದಳೋ ಅಷ್ಟೇ ಆನಂದದಿಂದ ಮಹಾ ನಂದೆಯು ಆ ಮುದುಕನೊಡನೆ ಸತಿಹೋಗಲಿಲ್ಲವೇ? ವಸಂತರಾವ, ಆನಂದವು

ಸಂಪತ್ತಿಯಲ್ಲಿ, ತಾರುಣ್ಯದಲ್ಲಿ ಅಥವಾ ಸೌಂದರ್ಯದಲ್ಲಿಲ್ಲ. ಆನಂದರತ್ನವು ಸದ್ಗುಣದ ಸುಧಾಸಾಗರದಲ್ಲಿಯೇ ಇರುವದು. ಆ ಸದ್ಗುಣ ಸುಧಾರಸದ ಸವಿಯು ಒಮ್ಮೆ ಹತ್ತಿತೆಂದರೆ ಸೌಖ್ಯದ ಗುರುಮಂತ್ರವು ಸಿಕ್ಕಿತೆಂದೇ ತಿಳಿಯಿರಿ. ಆ ಮೇಲೆ ಮೃತ್ಯುವು ಆನಂದಮಯ! ವಾರ್ಧಕ್ಯ ಆನಂದಮಯ! ರೋಗವು ಆನಂದಮಯ! ದಾರಿದ್ರ್ಯವು ಆನಂದಮಯ! ಪ್ರತ್ಯೇಕ ವಸ್ತುವೂ ಆನಂದ ಮಯ! ಸರ್ವಮಾನಂದಮಯಂ ಜಗತ್! ಸದ್ಗುಣದ ಜಾದುಕಟ್ಟಿಗೆಯು ಪ್ರತ್ಯೇಕವಸ್ತುವಿನ ಸ್ಥಿತಿಯನ್ನು ಬದಲಿಸಿ ಎಲ್ಲೆಲ್ಲಿಯೂ ಆನಂದವನ್ನೇ ಉಂಟು ಮಾಡುತ್ತದೆ. ಆ ಮೇಲೆ ಸೀತೆಯಂತೆ ವನದಲ್ಲಿರಲಿ, ತಾರಾಮತಿಯಂತೆ ಕಲ್ಲುಮುಳ್ಳುಗಳಲ್ಲಿ ತಿರುಗಲಿ, ದಮಯಂತಿಯಂತೆ ದಾರಿದ್ರ್ಯದಲ್ಲಿ ಬೀಳಲಿ, ಮಹಾನಂದೆಯಂತೆ ಮಹಾ ರೋಗಿಯೊಡನೆ ಲಗ್ನವಾಗಲಿ, ವಸಂತಸೇನೆಯಂತೆ ಮೃತ್ಯುವಿನ ದವಡೆಯಲ್ಲಿ ಸಿಗಲಿ, ಹೀಗೆ ಎಲ್ಲಿ ಹೋದರೂ ಏನಾದರೂ ಆನಂದವೇ ಆನಂದ! ಸದ್ಗುಣಿಯಾದ ಪತ್ನಿಗೆ ತನ್ನ ಪತಿಯು ಮುದುಕನಿರಲಿ, ದರಿದ್ರನಿರಲಿ ಆತನೊಡನೆ ಪ್ರೇಮದಿಂದ ಬಾಳ್ವೆಮಾಡಿಕೊಂಡಿರುವದೇ ಸ್ವರ್ಗದ ಸೋಪಾನವು. ಇದನ್ನರಿಯದೆ ನನ್ನಂತೆ ಹರಿಹರಿಗೆ ಅಡ್ಡಾಡಿದರೆ ದುಃಖವೆಂದಿಗೂ ತಪ್ಪುವದಿಲ್ಲ.

ವಸಂತ—(ನಮಸ್ಕರಿಸಿ) ತಾಯೇ, ಕಮಲಾವತೀ, ಈಗ ನನ್ನ ಜ್ಞಾನ ದೃಷ್ಟಿಯು ತೆರೆಯಿತು. ಇನ್ನು ಮೇಲೆ ಸರ್ವಸ್ತ್ರೀಯರನ್ನೂ ನನ್ನ ಅಕ್ಕ-ತಂಗಿ ಯರೆಂದು ತಿಳಿದು ನಡೆಯುವೆನು.

ಕಮಲಾ—ಹಾಗಲ್ಲ ಡಾಕ್ಟರ, ನಿಮಗೆ ಹೇಳುವ ಅಧಿಕಾರವು ನನಗಿಲ್ಲ. ಆದರೂ ಹೀಗೆ ಮನೆಮನೆಗೆ ಪರಿಚಯಬೆಳಿಸಿ ನಮ್ಮಂಥ ತರುಣ ಸ್ತ್ರೀಯರನ್ನು ಹಾಳುಮಾಡುವ ಶಕ್ತಿಯನ್ನೇ ನಿಮ್ಮಂಥ ರೂಪವಾನ್, ವಿದ್ವಾನ್ ಮತ್ತು ಸುಶಿಕ್ಷಿತ ತರುಣರು ದೇಶಸೇವೆಯಲ್ಲಿ ಉಪಯೋಗ ಮಾಡಿದರೆ ಎಷ್ಟು ಹಿತ ವಾಗುವದು?

ವಸಂತ—ದೇವೀ, ಇನ್ನು ಮೇಲೆ ಹಾಗೆಯೇ ಮಾಡುವೆನು. ಇದೇ ನನ್ನ ತಾಯಿಯ ಆಶೀರ್ವಾದವೆಂದು ತಿಳಿಯುವೆನು.

ವಿನಾಯಕ—(ಜನಾಂತಿಕಂ) ಈಗಲೇ ನಾನೂ ಹೋಗಿ ಕಮಲಾ ವತಿಯ ಕ್ಷಮೆಬೇಡಿದರೆ ಹೇಗಾಗುವದು? ಅಥವಾ ಇನ್ನೂ ನೋಡೋಣ. ಕಡೆಗೆ ಇದ್ದೇ ಇದೆ.

ಕಮಲಾವತಿ—ಡಾಕ್ಟರ, ಸದ್ಗುಣಗಳಿಂದಲೇ ಸುಸ್ವರೂಪಕ್ಕೆ ಶೋಭೆ

ಬರುವದು. ಹೆಂಗಸೇನು ಗಂಡಸೇನು? ಈ ಮಾನವದೇಹವೆಂಬದು ಹೊಲಸು ವಸ್ತ್ರ! ಇದನ್ನು ಸದ್ಗುಣದ ಸಬಕಾರದಿಂದ ತೊಳೆತೊಳೆದಂತೆ ಹೊಳಪುಬರುತ್ತದೆ. ಈ ದೇಹವನ್ನು ಪವಿತ್ರವಾಗಿ ಇಟ್ಟಹಾಗೆ ಇದರಲ್ಲಿ ಹೆಚ್ಚು ಕರ್ತವ್ಯದಕ್ಷತೆಯು ಬರುವದು. ಇದನ್ನು ಬೇಕಾದಷ್ಟು ಹೊಲಸು ಸಹ ಮಾಡಲಿಕ್ಕೆ ಬರುತ್ತದೆ; ಆದರೆ ಆಗ ದೈವೀ ನಿಯಮವನ್ನು ಮೀರಿದ ಕೋಪಕ್ಕೆ ಒಳಗಾಗಬೇಕಾಗುವದು. ಇನ್ನು ಈ ಹೊಲಸು ದೇಹವಸ್ತ್ರದ ಮೇಲೆ ಯಾವ ಕಲೆಯೂ ಕೂಡದಂತೆ ಎಚ್ಚರಪಡಬೇಕು. ಆಫೀಸಿನಲ್ಲಿ ಹೋಗುವಾಗ ಹೇಗೆ ಹೊಲಸು ಅರಿವೆಗಳಿರದಂತೆ ನೀವು ಲಕ್ಷ ಕೊಡುತ್ತಿರೋ, ಅದರಂತೆ ಪರಮಾತ್ಮನೆದುರಿಗೆ ಹೋಗುವಾಗ ನಮ್ಮ ಜೀವನಚರಿತ್ರವು ಇಸ್ತ್ರಿಮಾಡಿದ ವಸ್ತ್ರದಂತೆ ನಿಷ್ಕಲಂಕ-ನಿರ್ಮಲತೆಗಳಿಂದ ಹೊಳೆಯುತ್ತಿರಬೇಕು. ಅದು ನಮ್ಮ ಸದಾಚಾರ-ವಿಚಾರಗಳಿಂದಲೇ ಸಿದ್ಧಿಸುವದು.

ವಸಂತ—ಹೌದು ಅದರಂತೆಯೇ ನಡೆಯುತ್ತೇನೆ.

ಕಮಲಾ—ಡಾಕ್ಟರ, ಪರಸ್ತ್ರೀಯ ಮೇಲೆ ಪಾಪಿಷ್ಠ ದೃಷ್ಟಿಯನ್ನು ಚೆಲ್ಲುವವನೇ ಪುರುಷನೆಂದು ನೀವು ಹೇಳುವಿರಿ; ಮತ್ತು ಯಾವನು ಹಗಲೆಲ್ಲ ವ್ಯಭಿಚಾರಕರ್ಮನಿರತನಾಗಿರುವನೋ ಅವನೇ ಒಳ್ಳೇ ಗಟ್ಟಿಗನೆಂದು ನಿಮ್ಮ ತಿಳುವಳಿಕೆಯಾಗಿದೆ; ಆದರೆ ಯಾವನು ಪರಸ್ತ್ರೀಯೆದುರಿಗೆ ನಪುಂಸಕನಾಗುವನೋ ಅವನೇ ನಿಜವಾದ ಗಂಡಸು, ಅವನೇ ನಿಜವಾದ ಬ್ರಹ್ಮಚಾರಿ, ಅವನೇ ರಾಷ್ಟ್ರವೀರ. ಅವನೇ ದೇಶಭಕ್ತ.

ವಸಂತ—ಹಾಗೆಂದರೆ ತಿಳಿಯಲಿಲ್ಲ.

ಕಮಲಾ—ಪುರುಷರು ಸ್ತ್ರೀಯರಿಗಿಂತ ಹೆಚ್ಚು ಬಲವುಳ್ಳವರಲ್ಲವೇ? ಮದ್ದಾನೆಯನ್ನು ಪುರುಷರು ಹಿಡಿದು ನಿಲ್ಲಿಸಬಲ್ಲರು; ಆದರೆ ಅದು ಸ್ತ್ರೀಯರ ಕೈಯಿಂದಾಗಲಾರದಲ್ಲವೆ?

ವಸಂತ—ಇಲ್ಲ, ಅದೆಂದೂ ಆಗಲಾರದು.

ಕಮಲಾ—ವಸಂತರಾವ, ಈ ದೇಹವೆಂದರೆ ಮದ್ದಾನೆಯು. ಒಮ್ಮೆ ಇಂದ್ರಿಯ ಚಾಪಲ್ಯದಿಂದ ಮದವು ಏರಿತೆಂದರೆ ಅದನ್ನು ಹಿಡಿಯುವದು ದುಸ್ತರವಾಗುವದು. ಆಗ ಆ ಆನೆಯನ್ನು ಪುರುಷರೇ ಬಗ್ಗಿಸಬೇಕಲ್ಲದೆ ಸ್ತ್ರೀಯರ ಕೈಯಿಂದ ಎಂದೂ ಆಗಲಾರದು. ನಿಜವಾದ ಗಂಡಸೆಂದರೆ ಈ ಮದ್ದಾನೆಯನ್ನು ವಶದಲ್ಲಿಟ್ಟುಕೊಳ್ಳುವವನೇ, ಅರ್ಥಾತ್ ಪರಸ್ತ್ರೀ ವಿಷಯದಲ್ಲಿ

ನಪುಂಸಕನಾಗಿರುವವನೇ ಗಂಡಸು. ವರ್ಷಕ್ಕೊಂದು ಬಾಣಂತಿತನವನ್ನು ಪಶುಗಳು ಸಹ ಮಾಡಿಸುವದಿಲ್ಲವೇ?

ವಸಂತ—ಕಮಲಾದೇವೀ, ನನ್ನ ದುರ್ವರ್ತನದ ವಿಷಯವಾಗಿ ಬಹಳ ನಾಚಿಕೆ ಬರಹತ್ತಿತು.

ಕಮಲಾ—ನನಗೂ ಹಾಗೆಯೇ ನಾಚಿಕೆ ಬರಹತ್ತಿದೆ. ಡಾಕ್ಟರ, ನಾವಿಬ್ಬರೂ ನಮ್ಮ ದುರ್ಗುಣವನ್ನು ಬೆಳಿಸಲಿಕ್ಕೆ ಪ್ರಯತ್ನಿಸುವದನ್ನು ಬಿಟ್ಟು, ನಮ್ಮ ನಮ್ಮ ಮನಸ್ಸನ್ನು ಅಂಕಿತದಲ್ಲಿಡುವದಕ್ಕೆ ಪ್ರಯತ್ನಿಸಿದ್ದರೆ ಈ ಪ್ರಸಂಗನೇ ಬರುತ್ತಿದ್ದಿಲ್ಲ.

ವಿನಾಯಕ—(ಜನಾಂತಿಕಂ) ತಲೆಗೆ ತಾಕಿದ ಮೇಲೆಯೇ ಎಲ್ಲರಿಗೂ ಬುದ್ಧಿ ಬರುವದು.

ವಸಂತ—ನನಗೆ ಮಾತ್ರ ಯಾರಿಗೂ ಮೋರೆ ತೋರಿಸದಂತಾಗಿದೆ.

ಕಮಲಾ—ವಸಂತರಾವ, ನಮ್ಮ ಸಮಾಜವು ಇಷ್ಟು ಹಾಳಾಗಲಿಕ್ಕೆ ವಿಲಾಯತಿಯ ಸುಧಾರಣೆಯ ಅನುಕರಣವೇ ಕಾರಣವು. ಸ್ತ್ರೀ ಪುರುಷರನ್ನೊಲಿಸುವದು ಪರಸ್ಪರ ಪವಿತ್ರ ಕರ್ತವ್ಯವೆಂದು ತಿಳಿದಿರುವರು. ಆತ್ಮಸಂಯಮನದ ಗಂಧವೇ ಅವರಿಗೆ ಗೊತ್ತಿಲ್ಲ. ವಸಂತಸೇನೆಯನ್ನು ನೋಡುವ ಪೂರ್ವದಲ್ಲಿ ಯಾವ ನನ್ನ ಪತಿಯು ನನಗೆ ಶತ್ರುವಾಗಿ ತೋರುತ್ತಿದ್ದನೋ, ಈಗ ಆತನೇ ನನಗೆ ಮದನನಂತೆ ತೋರುತ್ತಿರುವನು. ಆ! ಪ್ರತ್ಯೇಕ ಸ್ತ್ರೀಗೆ ತನ್ನ ಗಂಡನು ಕಾಮನೆಂದೂ, ಪ್ರತ್ಯೇಕ ಪುರುಷನಿಗೆ ತನ್ನ ಸ್ತ್ರೀಯು ರತಿಯಂತೆಯೂ ತೋರಹತ್ತಿದರೆ ಅವರ ಸುಖದ ಕ್ಷೀರಭಾಂಡದಲ್ಲಿ ದುಃಖ ಲವಣವು ಎಂದಾದರೂ ಬೀಳುವದೇ? ಆದರೆ ತಂದೆಗಳೇ, ಈಗಿನ ವಿವಾಹ ಪದ್ಧತಿಯಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಮಾಡಿರಿ; ಶಕ್ಯವಿದ್ದಮಟ್ಟಿಗೆ ವಿಚಾರಿಸಿ ಯೋಗ್ಯ ದಾಂಪತ್ಯವನ್ನು ಕೂಡಿಸಿರಿ; ರೂಪ, ವಯಸ್ಸು, ವಿದ್ಯೆಗಳ ವಿಚಾರಮಾಡಿ ಯೋಗ್ಯ ಜೊತೆಯನ್ನು ಹುಡುಕಿರಿ; ಒಂದುವೇಳೆ ದುರ್ದೈವದಿಂದ ಹಾಗೆ ಆಗದೆ ಇದ್ದರೆ, ನನ್ನ ಭಗಿನಿಯರೇ, ಸುಖದ ಸೆಳವಿಗೆ ಬಿದ್ದು ಪರಪುರುಷನನ್ನು ಆಶಿಸಿ ಇಹ-ಪರ ಸುಖಗಳೆರಡನ್ನೂ ಕೆಡಿಸಿಕೊಂಡು ನರಕದ ದಾರಿಯನ್ನು ಸರಳಮಾಡಿಕೊಳ್ಳಬೇಡಿರಿ. ಪ್ರಭುವು ಯಾವಾಗಲೂ ಆನಂದಮಯನಾಗಿದ್ದಾನೆ. ಪ್ರೇಮರಂಗದ ನಾಟ್ಯ ಮಾಡಿ ತನ್ನ ಮೃದುಮಧುರವಾದ ಕೊಳಲಿನ ಧ್ವನಿಯಿಂದ ಜಗತ್ತನ್ನೇ ಮೋಹಪಡಿಸುವ ಮುರಲೀಧರನು ನೆರೆಯಲ್ಲಿ ಬಂದಿದ್ದಾನೆ. ಡಾಕ್ಟರ,

ನನ್ನ ಆನಂದರಂಗವು ಅಭಂಗವಾಗಿದೆ. ನನ್ನ ಪತಿಯ ಸ್ಥಳದಲ್ಲಿ ಆ ಕೃಷ್ಣ ಮೂರುತಿಯು ನಿಂತು ನನ್ನ ಪತಿ ಗೃಹಕ್ಕೆ ಹೋಗಲು ದಾರೀ ತೋರಿಸುತ್ತಿರುವನು. ಪತಿಯ ಶುದ್ಧ ಪ್ರೇಮದಲ್ಲಿ ಆನಂದರಂಗದ ರಾಧಿಕೆಯಾಗಲಿಕ್ಕೆ ನನಗೆ ತಿಳಿಸುತ್ತಿರುವನು. ಡಾಕ್ಟರ ಇಗೋ ಹೊರಟೆ.

ಪದ. ರಾಗ—ಗರುಡಧ್ವನಿ. ತಾಳ—ತ್ರಿವಟ.

ಮಮ ಮಾನಸ ವರಸರಸಿಜ ಭಾನು |ಸುಮುಖವನು ತೋರು ನೀ ||ಪ||

ಸಿರಿಯನಾಥ | ಪ್ರೇಮಗೀತ | ಪರಮಯತಿಗಣನು ತಗಲಿದಾತ ||೧||

(ಕಮಲಾವತಿಯು ಹೋಗಹತ್ತುವಷ್ಟರಲ್ಲಿ ವಿನಾಯಕರಾಯನು ಬಂದು ಕಾಲಿಗೆ ಬೀಳುವನು.)

ವಿನಾಯಕ—(ಮುಂದೆನಿಂತು) ಪ್ರಿಯೇ ರಾಧಿಕೇ, ಈ ಹತಭಾಗ್ಯ ಚಂಡಾಲ ವಿನಾಯಕನು ಕ್ಷಮೆಬೇಡುತ್ತಿರುವನು. ನಿರಾಕರಿಸಬೇಡ.

ಕಮಲಾ—ಯಾರು ಯಾರು? ನನ್ನ ಅನಂಗರಂಗ! ನನ್ನ ಪಂಚಪ್ರಾಣ-ಪಂಚಬಾಣ! ನನ್ನ ಹೃದಯೇಶ್ವರ ಪ್ರಿಯನೇ, ಈ ಪಾಪಿಣಿಯನ್ನು ಕ್ಷಮಿಸು.

ವಿನಾಯಕ—ನಾನೇ ಆ ಅಧಮಾಧಮ. ಸರ್ವರೀತಿಯಿಂದಲೂ ನಿನಗೆ ಅಯೋಗ್ಯ ಪತಿ! ನಿನ್ನನ್ನು ವಂಚಿಸಿ ಲಗ್ನಮಾಡಿಕೊಂಡು ನಿನ್ನ ಸರ್ವ ಸುಖಗಳನ್ನು ಮಣ್ಣುಕೂಡಿಸಿದ ಚಾಂಡಾಲ ವಿನಾಯಕ! ನನ್ನನ್ನು ಕ್ಷಮಿಸು.

ಕಮಲಾ—ಯಾರು? ನನ್ನ ಪ್ರಾಣೇಶ, ಕ್ಷಮಿಸು. ಕಡೆಗೊಮ್ಮೆ ಈ ಪವಿತ್ರ ಚರಣಗಳ ದರ್ಶನಮಾಡಿಕೊಂಡು ಈ ಇಹ ಯಾತ್ರೆಯನ್ನು ಮುಗಿಸಬೇಕೆಂದು ಮಾಡಿದ್ದೆನು. ಪ್ರಿಯಾ, ಈ ದಾಸಿಯ ಸರ್ವಾಪರಾಧಗಳನ್ನು ಮನ್ನಿಸಿ ಅಪ್ಪಣೆಯನ್ನು ಕೊಡು. ಡಾಕ್ಟರ ಬರುತ್ತೇನೆ. ನಾನು ಹೇಳಿದ್ದನ್ನು ಮರೆಯಬೇಡಿರಿ. ಸಾಮಾಜಿಕ ತಂದೆ-ತಾಯಿಗಳೇ, ನಿಮ್ಮ ಮಕ್ಕಳನ್ನು ಲಗ್ನಮಾಡಿಕೊಡುವ ಮೊದಲು ಸಂಪೂರ್ಣ ವಿಚಾರಮಾಡಿರಿ. ದುಡ್ಡಿನ ಬಲಿಗೆ ಬಿದ್ದು, ಮಕ್ಕಳನ್ನು ಮಾರಿ ಅವರ ಸುಖವನ್ನು ಹಾಳುಮಾಡಬೇಡಿರಿ. ನನ್ನ ಮುದುಕ ತಂದೆಗಳೇ, ಮುಪ್ಪಿನಕಾಲದಲ್ಲಿ ಮನುಷ್ಯನ ಧ್ಯೇಯವನ್ನು ನೆನೆದು ಈ ಲಗ್ನದ ಹುಚ್ಚು ಬಿಟ್ಟು ಪರಮಾತ್ಮನ ಸಾನ್ನಿಧ್ಯವನ್ನು ಹೊಂದಿರಿ. ಎಲ್ಲರೂ ಈ ನಿಮ್ಮ ಮಗಳಿಗೆ ಆಶೀರ್ವಾದ ಮಾಡಿರಿ; ಬರುತ್ತೇನೆ ಪ್ರಿಯನೇ, ಮರೆಯಲ್ಲಿ ನಿಂತು ಎಲ್ಲವನ್ನೂ ಕೇಳಿರುವಿ. ಇಗೋ ಇದೇ ನನ್ನ -ನಿಮ್ಮ ಪ್ರೇಮಾ

ಮೃತವು. (ಎಂದು ವಿಷವನ್ನು ಸೀಸೆಯಿಂದ ತೆಗೆದು ಕುಡಿದು ಮರಣ ವನ್ನೈದುವಳು.)

ಡಾ. ವಸಂತ—(ಬಾಟ್ಲಿಯನ್ನು ನೋಡಿ) ಹಾಯ್! ಹಾಯ್! ಪ್ರಮಾ ದವು! ಕಮಲಾವತಿಯು ವಿಷವನ್ನು ಕುಡಿದಳು. (ನಾಡಿಯನ್ನು ನೋಡಿ) ಅಯ್ಯೋ! ಅಯ್ಯೋ! ಇವಳ ಇಹಲೋಕ ಯಾತ್ರೆಯು ಮುಗಿಯಿತು!

ವಿನಾಯಕ—ಆಃ! ಕಮಲಾವತಿ! ನನ್ನ ಹೃದಯ ದೇವತೇ! ಈ ಚಾಂಡಾ ಲನ ಸಲುವಾಗಿ ಎಷ್ಟು ಕಷ್ಟಪಟ್ಟೆಯಲ್ಲ? ನಿನ್ನನ್ನು ವಂಚಿಸಿ ಲಗ್ನಮಾಡಿ ಕೊಂಡಾಗಿನಿಂದ ನನ್ನಿಂದ ಒಂದು ದಿವಸವಾದರೂ ಸುಖವು ಸಿಗಲಿಲ್ಲವಲ್ಲವೇ? ಅಯ್ಯೋ! ಆ ರಮಾಬಾಯಿಯಂತೂ ಬೀದಿಯ ಭಿಕಾರಿಣಿಯಾದಳು. ಈ ಹಾಳಾದ ಶ್ರೀಮಂತಿಕೆಯ ಭರದಿಂದ ಎಷ್ಟು ಜನರನ್ನು ಹಾಳುಮಾಡಿ ಈ ರಾವಬಹಾದ್ದೂರಿಕೆಯನ್ನು ದೊರಕಿಸಿದೆನು. ಆಃ! ಭಾರತಮಾತೇ, ನಿನ್ನ ಹೊಟ್ಟೆಯಲ್ಲಿ ಹುಟ್ಟಿಬಂದು ನಿನ್ನ ಉದ್ಧಾರಕ್ಕಾಗಿ ಎಷ್ಟು ಮಾತ್ರವೂ ಪ್ರಯತ್ನಿ ಸಲಿಲ್ಲ. ಇಷ್ಟೇ ಅಲ್ಲ, ಈ ಸಾಹೇಬಜನರ ಪ್ರೀತಿಗಾಗಿ ನಿನ್ನ ನಾಶಕ್ಕಾಗಿ ಬೇಕಾದಷ್ಟು ಯತ್ನಮಾಡಿದೆನು! ಕ್ಷಮಿಸು. ನನ್ನ ಶ್ರೀಮಂತಿಕೆಯ ಉಪ ಯೋಗವು ಬಡವರನ್ನು ವಂಚಿಸಿ ಹಾಳು ಮಾಡುವದರಲ್ಲಿಯೇ ಆಯಿತು. ದೇಶ ಹಿತಕ್ಕಾಗಿ ಒಂದು ಪೈಯನ್ನೂ ಖರ್ಚು ಮಾಡಲಿಲ್ಲ. ಆಃ! ಕಮಲಾ ವತೀ, ನಿನ್ನನ್ನು ಇನ್ನೆಲ್ಲಿ ಕಾಣುವೆನು? ಡಾಕ್ಟರ, ಮುಗಿಯಿತು; ಇಲ್ಲಿಗೆ ನಮ್ಮ ಆಟವು ಮುಗಿಯಿತು! ಸಾಮಾಜಿಕರೇ, ದುಡ್ಡಿನ ಆಶೆಗಾಗಿ ನಿಮ್ಮ ಹೆಣ್ಣುಮಕ್ಕಳನ್ನು ನನ್ನಂಥ ಮುದುಕರಿಗೆ ಕೊಟ್ಟು ಅವರ ಪಾತಿವ್ರತ್ಯವನ್ನು ಹಾಳುಮಾಡಬೇಡಿರಿ. ನನ್ನ ಮುದುಕಬಂಧುಗಳೇ, ಮುದಿಹುಚ್ಚಿನಿಂದ ತರು ಣಿಯು ಕೈಹಿಡಿದರೆ ನೀವೂ ನನ್ನಂತೆಯೇ ಆತ್ಮಹತ್ಯೆ ಮಾಡಿಕೊಳ್ಳಬೇಕಾಗುವ ದೆಂಬದು ನೆನಪಿನಲ್ಲಿರಲಿ! ಡಾಕ್ಟರ, ನನ್ನ ಆಸ್ತಿಯ ವ್ಯವಸ್ಥೆಯನ್ನು ಹೇಗೆ ಮಾಡ ಬೇಕೆಂಬ ಬಗ್ಗೆ ಉಯಿಲು ಬರೆದು ವಿಶ್ವಾಸರಾಯರ ಹೆಸರಿನಿಂದ ಕಳಿಸಿದ್ದೇನೆ. ಅದರಂತೆ ವ್ಯವಸ್ಥೆ ಮಾಡಿರಿ; ಮತ್ತು ಕಮಲಾವತಿಯ ಆಜ್ಞೆಯಂತೆ ನೀವೆಲ್ಲ ತರು ಣರು ಒಟ್ಟಾಗಿ ದೇಶಸೇವೆ ಮಾಡಲು ಸಿದ್ಧರಾಗಿರಿ. ವಸಂತರಾವ, ನಿಮ್ಮನ್ನು ನೋಡಿದಾಗ, ನಿಮ್ಮಿಬ್ಬರನ್ನೂ ಒಮ್ಮೆಲೇ ಕೊಲ್ಲಬೇಕೆಂದು ತಂದ ಕತ್ತಿಯಿದು. ಇದೇ ಈಗ ನನ್ನ ಪ್ರಿಯಾಸಮಾಗಮ ಸುಖಮಾರ್ಗವನ್ನು ತೋರಿಸುವದು. ಕಮಲೇ ಬರುತ್ತೇನೆ! ಡಾಕ್ಟರ, ನಿಮ್ಮ ಮಿತ್ರರಿಗೆ, ಶತ್ರುಗಳಿಗೆ, ಆಪ್ತರಿಗೆ, ಇಷ್ಟ

ರಿಗೆ, ಅಪರಿಚಿತರಿಗೆ, ಆಗಂತುಕರಿಗೆ, ಒರುವವರಿಗೆ, ಹೋಗುವವರಿಗೆ ಎಲ್ಲರಿಗೂ ನನ್ನ ಮರಣಸಂದೇಶವನ್ನು ಹೇಳಿರಿ; ಕಮಲಾದೇವಿ, ಬರುತ್ತೇನೆ, ದೂರಹೋಗಬೇಡ. (ಎಂದು ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ.)

ವಸಂತ— ಈ ಎರಡೂ ಪವಿತ್ರ ಆತ್ಮಗಳು ಆಹುತಿಯಾದುದು ಏತಕ್ಕಾಗಿ? ರಮಾಬಾಯಿಗೆ ಮಗಳ ಮೇಲಿನ ಪ್ರೇಮವು ಹೋಗಿ ದ್ರವ್ಯದ ಮೇಲಾದ ಪ್ರೇಮಪರಿವರ್ತನ! ಮುದುಕ ವಿನಾಯಕರಾಯರಿಗೆ ಮುಪ್ಪಿನಕಾಲದಲ್ಲಿರಬೇಕಾದ ಈಶ್ವರನ ಮೇಲಿನ ಪ್ರೇಮವು ಹೋಗಿ ತರುಣಿಯ ಮೇಲಾದ ಪ್ರೇಮಪರಿವರ್ತನ! ತರುಣ ಕಮಲಾವತಿಗೆ ತರುಣನ ಮೇಲಿನ ದಾಂಪತ್ಯ ಪ್ರೇಮವು ಹೋಗಿ ಮುದುಕನ ಮೇಲೆ ಮಾಡಬೇಕಾದ ಬಲಾತ್ಕಾರದ ಪ್ರೇಮಪರಿವರ್ತನ!! ಅಂತೂ ಇದೆಲ್ಲ ಆಟವೂ ಪ್ರೇಮಪರಿವರ್ತನ!!!



ಸಂಪೂರ್ಣ.